ಪ್ರಜಾವಾಣಿ ಸೋಮವಾರ 19ನೇ ಡಿಸೆಂಬರ್ 2011

## 'ಭಾರತೀಯ ಎಂಜಿನಿಯರಿಂಗ್ ಸಮಾವೇಶ- 2011'ರ ಸಮಾರೋಪ

# 'ಸಿವಿಲ್, ಮೆಕಾನಿಕಲ್ ಕೂಡ ಮಹತ್ವದ್ದು'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ದೇಶದ ಅಭಿವೃದ್ಧಿಯಲ್ಲಿ ಐಟಿ ಎಂಜಿನಿಯರ್‌ಗಳ ಸೇವೆಯ ಜತೆಗೆ ಸಿವಿಲ್ ಹಾಗೂ ಮೆಕಾನಿಕಲ್ ಎಂಜಿನಿಯರ್‌ಗಳ ಪಾತ್ರವೂ ಮಹತ್ವದ್ದಾಗಿದೆ' ಎಂದು ಭಾರತೀಯ ಎಂಜಿನಿಯರುಗಳ ಸಂಸ್ಥೆಯ ಅಧ್ಯಕ್ಷ ಎಸ್.ಎಲ್.ಗಾರ್ಗ್ ಹೇಳಿದರು.

ನಗರದಲ್ಲಿ ಭಾನುವಾರ ನಡೆದ 'ಭಾರತೀಯ ಎಂಜಿನಿಯರಿಂಗ್ ಸಮಾವೇಶ-2011'ರ ಸಮಾರೋಪ ಸಮಾರಂಭದಲ್ಲಿ ಮಾತನಾಡಿದ ಅವರು, 'ದೇಶದಲ್ಲಿ ಆರ್ಥಿಕ ಏರುಪೇರು ಉಂಟಾಗುತ್ತಿರುವ ಸಂದರ್ಭದಲ್ಲಿ ಅದನ್ನು ನಿಯಂತ್ರಣಕ್ಕೆ ತರುವ ಮಹತ್ತರವಾದ ಕಾರ್ಯ ಎಂಜಿನಿಯರುಗಳದ್ದಾಗಿದೆ. ಎಂಜಿನಿಯರ್‌ಗಳ ಸೇವೆಯ ಮಹತ್ವ ಸರ್ಕಾರಕ್ಕೆ ಅರಿವಾಗಬೇಕಿದೆ' ಎಂದರು.

'ದೇಶದಲ್ಲಿ ಪ್ರತಿ ವರ್ಷ ಲಕ್ಷಾಂತರ ಹೊಸ ಎಂಜಿನಿಯರುಗಳು ಕಾಲೇಜುಗಳಿಂದ ತಯಾರಾಗಿ ಹೊರ ಬರುತ್ತಿದ್ದಾರೆ. ಈ ಯುವ ಎಂಜಿನಿಯರ್‌ಗಳ ಸಮರ್ಪಕ ಬಳಕೆಯ ಬಗ್ಗೆ ಸರ್ಕಾರ ಯೋಚಿಸಬೇಕಿದೆ. ಶೈಕ್ಷಣಿಕ ಎಂಜಿನಿಯರಿಂಗ್ ಕ್ಷೇತ್ರದ ಬಗ್ಗೆ ಹೆಚ್ಚಿನ ಗಮನ ಹರಿಸುವುದು ಕೂಡ ಇಂದಿನ ಅಗತ್ಯವಾಗಿದೆ' ಎಂದು ಅವರು ಅಭಿಪ್ರಾಯಪಟ್ಟರು.

'ಮಹಿಳಾ ಎಂಜಿನಿಯರುಗಳಿಗೆ ಪ್ರತ್ಯೇಕ ವೇದಿಕೆಯನ್ನು ಈ ಬಾರಿಯ ಸಮ್ಮೇಳನದಿಂದ ಆರಂಭಿಸಲಾಗಿದೆ. ಇದು ಮುಂದುವರೆಯಬೇಕಿದೆ' ಎಂದು ಅವರು ಆಶಿಸಿದರು.

ಸಮಾರಂಭದಲ್ಲಿ ಮಾತನಾಡಿದ ಕೊರಿಯನ್ ನಿಯೋಗದ ಮುಖ್ಯಸ್ಥ ಡಾ.ಹಾನ್, 'ಸಂಸ್ಥೆಯು ಉತ್ತಮವಾಗಿ ಸಮ್ಮೇಳನ ಆಯೋಜಿಸಿದ್ದು ಸಂತೋಷ ತಂದಿದೆ. ಭಾರತೀಯ ಎಂಜಿನಿಯರುಗಳ ಹೊಸ ಸಂಶೋಧನೆಗಳ ಬಗ್ಗೆ ತಿಳಿದುಕೊಳ್ಳಲು ಸಮ್ಮೇಳನ ಅಪೂರ್ವ ಅವಕಾಶ ಒದಗಿಸಿತು. ಎಂಜಿನಿಯರಿಂಗ್ ಕ್ಷೇತ್ರಕ್ಕೆ ಉತ್ತೇಜನ ನೀಡುವ ಸಮ್ಮೇಳನ ಇದಾಗಿತ್ತು' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸಮ್ಮೇಳನದ ಸಂಘಟನಾ ಸಮಿತಿಯ ಅಧ್ಯಕ್ಷ ಎಲ್.ವಿ.ಮುರಳಿಕೃಷ್ಣ, 'ಎಲ್ಲಾ ಕ್ಷೇತ್ರಗಳ ಎಂಜಿನಿಯರುಗಳನ್ನು ಸಂಘಟಿಸಿ ಸಮ್ಮೇಳನ ನಡೆಸಲಾಗಿದೆ. 15 ಕ್ಷೇತ್ರಗಳನ್ನು ವಿಭಾಗಿಸಿ ಸಮ್ಮೇಳನದಲ್ಲಿ ಚರ್ಚೆ ನಡೆಸಲಾಗಿದೆ.

ಎಂಜಿನಿಯರಿಂಗ್ ಕ್ಷೇತ್ರದ ಸಂಶೋಧನೆ ಹಾಗೂ ಅವಕಾಶಗಳ ಬಗ್ಗೆ ಚರ್ಚೆ ನಡೆದಿದೆ. ಶೈಕ್ಷಣಿಕ ಎಂಜಿನಿಯರಿಂಗ್ ಕ್ಷೇತ್ರದ ಅವಕಾಶ ಹಾಗೂ ಸರ್ಕಾರದ ಅನುದಾನಗಳ ಬಗ್ಗೆಯೂ ಸಮ್ಮೇಳನ ಬೆಳಕು ಚೆಲ್ಲಿದೆ' ಎಂದರು. 'ಸಮ್ಮೇಳನದಲ್ಲಿ ಸುಸ್ಥಿರ ಅಭಿವೃದ್ಧಿ, ತಂತ್ರಜ್ಞಾನದ ಹೊಸ ಸಾಧ್ಯತೆಗಳೂ ಸೇರಿದಂತೆ ವಿವಿಧ ಆಯಾಮಗಳಲ್ಲಿ ಚರ್ಚೆಗಳು ನಡೆದಿವೆ. ಎಂಜಿನಿಯರಿಂಗ್ ಕ್ಷೇತ್ರದಲ್ಲಿ ಇಂದು ಶೇ 20 ರಷ್ಟು ಮಹಿಳೆಯರಿದ್ದಾರೆ. ಅವರ ಕೊಡುಗೆಗಳು ಹಾಗೂ ಮುಂದಿನ ದಾರಿಯ ಬಗ್ಗೆ ವಿಶೇಷ ಚರ್ಚೆಗಳನ್ನು ನಡೆಸಲಾಗಿದೆ. ಮುಂದಿನ ಸಮ್ಮೇಳನವನ್ನು ಇನ್ನಷ್ಟು ಯಶಸ್ವಿಯಾಗಿ ನಡೆಸಲಾಗುವುದು' ಎಂದು ಅವರು ತಿಳಿಸಿದರು.

ಸಮಾರಂಭದಲ್ಲಿ ಭಾರತೀಯ ಎಂಜಿನಿಯರುಗಳ ಸಂಸ್ಥೆಯ ಮಾಜಿ ಅಧ್ಯಕ್ಷ ಜಿ.ಪ್ರಭಾಕರ್, ಸಂಸ್ಥೆಯ ಕರ್ನಾಟಕ ವಿಭಾಗದ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಹಾಗೂ ಸಂಸ್ಥೆಯ ಕೇಂದ್ರ ಸಮಿತಿಯ ಸದಸ್ಯರು ಪಾಲ್ಗೊಂಡಿದ್ದರು.




ಅರಮನೆ ಮೈದಾನದಲ್ಲಿ ಭಾನುವಾರ ನಡೆದ ಭಾರತೀಯ ಎಂಜಿನಿಯರಿಂಗ್ ಸಮಾವೇಶ- 2011'ರ ಸಮಾರೋಪ ಸಮಾರಂಭದಲ್ಲಿ ಭಾರತೀಯ ಎಂಜಿನಿಯರುಗಳ ಸಂಸ್ಥೆಯ ಅಧ್ಯಕ್ಷ ಎಸ್.ಎಲ್.ಗಾರ್ಗ್, ಸಂಸ್ಥೆಯ ಮಾಜಿ ಅಧ್ಯಕ್ಷ ಜಿ.ಪ್ರಭಾಕರ್, ಸಮಾವೇಶದ ಸಂಘಟನಾ ಸಮಿತಿಯ ಸದಸ್ಯ ಡಿ.ವಿ.ನಾಗಭೂಷಣ್ ಮತ್ತು ಪ್ರೊ. ಎಂ.ಆರ್.ಪ್ರಾಣೇಶ್ ಪಾಲ್ಗೊಂಡಿದ್ದರು -ಪ್ರಜಾವಾಣಿ ಚಿತ್ರ

ಉದಯವಾಣಿ
ಶನಿವಾರ | ಡಿಸೆಂಬರ್ | 17 | 2011

ಎಂಜಿನಿಯರಿಂಗ್ ಕಾಂಗ್ರೆಸ್...




ನಗರದ ಅರಮನೆ ಮೈದಾನದಲ್ಲಿ ಆಯೋಜಿಸಿದ್ದ ಭಾರತೀಯ ಎಂಜಿನಿಯರಿಂಗ್ ಕಾಂಗ್ರೆಸ್‌ನ ಪ್ರದರ್ಶನದಲ್ಲಿ ಬೃಹತ್ ನೀರಾವರಿ ಸಚಿವ ಬಸವರಾಜ ಬೊಮ್ಮಾಯಿ, ಕೈಗಾರಿಕೆ ಸಚಿವ ಮುರುಗೇಶ್ ನಿರಾಣಿ, ಸಮಾವೇಶ ಸಂಘಟನಾ ಅಧ್ಯಕ್ಷ ಡಾ.ಎಲ್.ವಿ. ಮುರುಳಿಕೃಷ್ಣರೆಡ್ಡಿ ಪಾಲ್ಗೊಂಡಿದ್ದರು.

# ಭೂಮಿ ಕೊಡ್ತೀವಿ ಉದ್ಯಮಿಗಳಾಗಿ: ಎಂಜಿನಿಯರ್‌ಗಳಿಗೆ ನಿರಾಣಿ ಕರೆ

ಬೆಂಗಳೂರು: ಇಂಜನಿಯರ್‌ಗಳು ಉದ್ದಿಮೆದಾರರಾಗಲು ಮುಂದೆ ಬಂದರೆ ಬೆಂಗಳೂರು ಹಾಗೂ ಬೆಂಗಳೂರು ಸುತ್ತಮುತ್ತಲಿನ 1,19,000 ಎಕರೆ ಭೂಮಿ, 24 ಗಂಟೆಗಳ ಕಾಲ ನೀರು ಹಾಗೂ 9,000 ಮೆಗಾವ್ಯಾಟ್ ವಿದ್ಯುತ್ ಸೌಲಭ್ಯವನ್ನು ಒದಗಿಸುವುದಾಗಿ ಕೈಗಾರಿಕ ಸಚಿವ ಮುರುಗೇಶ್ ನಿರಾಣಿ ತಿಳಿಸಿದ್ದಾರೆ.

ಭಾರತೀಯ ಇಂಜನಿಯರಿಂಗ್ ಸಂಸ್ಥೆಯು ನಗರದ ಅರಮನೆ ಮೈದಾನದಲ್ಲಿ ಆಯೋಜಿಸಿದ್ದ ಭಾರತೀಯ ಇಂಜನಿಯರಿಂಗ್ ಕಾಂಗ್ರೆಸ್ ಸಮಾವೇಶವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಜೂನ್‌ನಲ್ಲಿ ನಡೆಯಲಿರುವ ಎರಡನೆ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಸಂಬಂಧಿಸಿದಂತೆ ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸುವ ಕಾರ್ಯ ನಡೆಯುತ್ತಿದೆ. ಜಗತ್ತಿನ ಬೃಹತ್ ಉದ್ದಿಮೆದಾರರು ಭಾಗವಹಿಸುವ ಸಾಧ್ಯತೆಗಳಿವೆ. ವಾರೆನ್ ಬಫೆಟ್ ಹಾಗೂ ರತನ್ ಟಾಟಾ ಸಮಾವೇಶದಲ್ಲಿ ಭಾಗವಹಿಸಲಿದ್ದಾರೆ ಎಂದು ತಿಳಿಸಿದರು.

ಕಳೆದ ಸಮಾವೇಶದಲ್ಲಿ ಅನಿಲ, ಸಿಮೆಂಟ್, ಸ್ಟೀಲ್ ಕ್ಷೇತ್ರದೆಡೆಗೆ ಸಾಕಷ್ಟು ಗಮನ ನೀಡಲಾಗಿತ್ತು. ಆದರೆ ಈ ಸಮಾವೇಶದಲ್ಲಿ ಶಿಕ್ಷಣ , ಆಹಾರ ಹಾಗೂ ಜವಳಿ ಕ್ಷೇತ್ರವನ್ನು ಹೆಚ್ಚು ಕೇಂದ್ರೀಕರಿಸಲಾಗುವುದು. ಈ ಸಮಾವೇಶದಿಂದ ಸುಮಾರು 10 ಲಕ್ಷ ನಿರುದ್ಯೋಗಿಗಳಿಗೆ ಉದ್ಯೋಗ ಸಿಗುವ ಸಾಧ್ಯತೆಗಳಿವೆ ಎಂದು ವಿವರಿಸಿದರು.

ಆರ್ಥಿಕ ಕುಸಿತ ಉಂಟಾದಾಗ ಅವಕಾಶಗಳು ಕಮ್ಮಿಯಾಗುವುದು ಸಹಜವೇ ಆದರೂ ಈಗಿನ ಸಾಧಾರಣ ಮಟ್ಟದಲ್ಲಿ ಇಂಜನಿಯರ್‌ಗಳಿಗಿರುವ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕು ಎಂದು ಜಲಸಂಪನ್ಮೂಲ ಸಚಿವ ಬಸವರಾಜ ಬೊಮ್ಮಾಯಿ ತಿಳಿಸಿದರು.

ಸಂಯುಕ್ತ ಕರ್ನಾಟಕ | ಬೆಂಗಳೂರು
11-12-2011

# ಕರ್ನಾಟಕ ಏಕೀಕರಣಕ್ಕೆ ನಿಜಲಿಂಗಪ್ಪ ಕೊಡುಗೆ ಅಪಾರ

ಬೆಂಗಳೂರು, ಡಿ.10: ಕರ್ನಾಟಕ ರಾಜ್ಯ ಏಕೀಕರಣಕ್ಕೆ ಮಾಜಿ ಮುಖ್ಯಮಂತ್ರಿ ದಿವಂಗತ ನಿಜಲಿಂಗಪ್ಪ ಅವರ ಕೊಡುಗೆ ಅಪಾರವಾದದ್ದು ಎಂದು ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಅವರು ನಿಜಲಿಂಗಪ್ಪ ಅವರ ಕೊಡುಗೆಯನ್ನು ಸ್ಮರಿಸಿದರು.

ಮಾಜಿ ಮುಖ್ಯಮಂತ್ರಿ ಕೀರ್ತಿಶೇಷ ಎಸ್. ನಿಜಲಿಂಗಪ್ಪ ಅವರ ಸ್ಮರಣಾರ್ಥ ಕರ್ನಾಟಕ ಸಾಂಸ್ಕೃತಿಕ ಅಕಾಡೆಮಿ ಹಮ್ಮಿಕೊಂಡಿದ್ದ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ನಿಜಲಿಂಗಪ್ಪ ಅವರು ಹರಿದು ಹಂಚಿ ಹೋಗಿದ್ದ ಕರ್ನಾಟಕ ರಾಜ್ಯವನ್ನು ಹಲವಾರು ಸಮಸ್ಯೆಗಳು ಹಾಗೂ ರಾಜಕೀಯ ಮುಖಂಡರ ವಿರೋಧದ ನಡುವೆಯೂ ಒಗ್ಗೂಡಿಸುವಲ್ಲಿ ಶ್ರಮಿಸಿದ ಮಹನೀಯ ಎಂದು ನುಡಿದರು. ಅಂದಿನ ಪ್ರಧಾನಿ ಜವಾಹರ್ ಲಾಲ್ ಅವರಿಗೆ ಭಾಷಾವಾರು ಪ್ರಾಂತ ರಚನೆಯು ಅಭಿರುಚಿಯಿಲ್ಲದಿದ್ದರೂ ಅವರ ದ್ವೇಷ ಕಟ್ಟಿಕೊಂಡು ಅನೇಕ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಿ ಬದ್ಧತೆ ಹಾಗೂ ಶ್ರದ್ಧೆಯಿಂದ ರಾಜ್ಯವನ್ನು ಒಂದುಗೂಡಿಸಿದ ನಿಜಲಿಂಗಪ್ಪ ಅವರು ರಾಷ್ಟ್ರಪತಿ ಸ್ಥಾನವನ್ನು ಅತಿ ವಿನಯದಿಂದ ತಿರಸ್ಕರಿಸಿದ ಅಜಾತಶತ್ರು. ಅಷ್ಟೇ ಅಲ್ಲದೆ ಮಾಹಿತಿ ಹಕ್ಕು ಮತ್ತು ಶಿಕ್ಷಣ ಹಕ್ಕು ಕಾಯ್ದೆಗಳು ಜಾರಿಗೊಳ್ಳಲು ನಿಜಲಿಂಗಪ್ಪ ಅವರ ಮಾರ್ಗದರ್ಶನವೇ ಕಾರಣ.

ಸಮಾಜದಲ್ಲಿ ಭ್ರಷ್ಟಾಚಾರ ಮಿತಿಮೀರುತ್ತಿರುವ ಕಾಲಘಟ್ಟದಲ್ಲಿ ನಿಜಲಿಂಗಪ್ಪ ಅವರಂತಹ ಸಜ್ಜನ ರಾಜಕಾರಣಿಗಳ ತತ್ವ ಮತ್ತು ಆದರ್ಶಗಳನ್ನು ಎಲ್ಲರೂ ಅಳವಡಿಸಿಕೊಂಡು ಶುದ್ಧ ಹಸ್ತರಾಗಿ ಜೀವನ ನಡೆಸಬೇಕು. ಅದರಲ್ಲೂ ದೇಶದ ಭವಿಷ್ಯವಾಗಿರುವ ಯುವಪೀಳಿಗೆ ಕಡ್ಡಾಯವಾಗಿ ಇಂತಹ ಸಜ್ಜನರ ಆದರ್ಶವನ್ನು ಪರಿಪಾಲಿಸಬೇಕು ಎಂದು ಸಲಹೆ ನೀಡಿದರು. ಎಸ್.ಎಂ. ಆಂಜನೇಯ ಅವರಿಗೆ ಅಖಿಲಾಂಡ ಕೋಟಿ ಬ್ರಹ್ಮಾಂಡ ಜ್ಯೋತಿರ್ವಿಜ್ಞಾನ ಪ್ರಶಸ್ತಿ ನೀಡಿ ಪುರಸ್ಕರಿಸಲಾಯಿತು. ಅಲ್ಲದೆ ಕೆ.ಎಂ. ಗುಡಿ, ಎಲ್.ಆರ್. ಮೋಹನರಾಜ್, ನಿಶ್ಚಿತ್ ಅಪ್ಪಾಜಿ, ಎಸ್. ವೀರಭದ್ರಪ್ಪ, ಎಸ್. ಸಿದ್ದರಾಜು ಬೆಳ್ಳಿಯಪ್ಪ ಹಾಗೂ ಬಿ. ಸುಶೀಲ ಅವರಿಗೆ ಕರ್ನಾಟಕ ಭೂಷಣ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಇದೇ ಸಂದರ್ಭದಲ್ಲಿ ಸಮಾರಂಭದಲ್ಲಿ ಉಪಸ್ಥಿತರಿದ್ದ ಕೂಡಲ ಮಠದ ಶ್ರೀ ಡಾ. ಶಾಂತವೀರ ಸ್ವಾಮೀಜಿ, ವಿರಕ್ತ ಮಠದ ಶ್ರೀ ಗುರುಬಸವ ಸ್ವಾಮೀಜಿ, ಲಿಂಗಾಯತ ಪಂಚಮಸಾಲಿ ಮಠದ ಶ್ರೀ ಬಸವ ಜಯಮೃತ್ಯುಂಜಯ ಸ್ವಾಮೀಜಿ, ಹೈಕೋರ್ಟ್ ನ್ಯಾಯಮೂರ್ತಿ ಎಚ್. ಬಿಲ್ಲಪ್ಪ, ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ಕೆ.ಎನ್. ಸುಬ್ಬಾರೆಡ್ಡಿ, ಉದ್ಯಮಿ ಡಾ. ವೂಡೇ ಪಿ. ಕೃಷ್ಣ, ಲಹರಿ ವಕೀಲರ ವೇದಿಕೆ ಅಧ್ಯಕ್ಷ ಎಸ್.ವಿ. ಶ್ರೀನಿವಾಸಮೂರ್ತಿ, ಷಣ್ಮುಖ ಕಲಾನಿಕೇತನದ ಅಧ್ಯಕ್ಷ ಡಿ. ಪ್ರಕಾಶ್ ಹಾಗೂ ಅಕಾಡೆಮಿ ಅಧ್ಯಕ್ಷ ಪ್ರೊ. ಡಿ.ಬಿ. ರಾಜು ಸೇರಿದಂತೆ ಮತ್ತಿತರರು ನಿಜಲಿಂಗಪ್ಪ ಅವರ ಕೊಡುಗೆಗಳನ್ನು ಮನಸಾರೆ ಸ್ಮರಿಸಿದರು.

ಸಂಯುಕ್ತ ಕರ್ನಾಟಕ

28-11-2011

# 'ವಿದ್ಯಾವಂತರು ಅನ್ಯಾಯವನ್ನು ಪ್ರತಿಭಟಿಸಬೇಕು'

ಬೆಂಗಳೂರು, ನ. 27: ಸಮಾಜದಲ್ಲಿನ ಅನ್ಯಾಯವನ್ನು ಪ್ರತಿಯೊಬ್ಬ ವಿದ್ಯಾವಂತರೂ ಪ್ರತಿಭಟಿಸಬೇಕು ಎಂದು ಹಿರಿಯ ಸಾಹಿತಿ ಡಾ. ಪಾಟೀಲ ಪುಟ್ಟಪ್ಪ ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ವತಿಯಿಂದ ಆಯೋಜಿಸಿದ್ದ ಪ್ರೊ. ಎಚ್. ಆರ್. ದಾಸೇಗೌಡರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ರಾಷ್ಟ್ರದಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗಿದೆ. ಆದರೆ ಕಣ್ಣೆದುರು ನಡೆವ ಅನ್ಯಾಯದ ವಿರುದ್ಧ ಈ ವಿದ್ಯಾವಂತರು ದನಿ ಎತ್ತುವುದೇ ಇಲ್ಲ. ಇದು ನಮ್ಮ ದೇಶದ ದುರಂತ ಎಂದು ವಿಷಾದ ವ್ಯಕ್ತಪಡಿಸಿದರು.

ನಮ್ಮ ಮಧ್ಯೆ ದೊಡ್ಡ ಹಗರಣ ನುಂಗುವವರಿದ್ದಾರೆ. ಆದರೆ, ಅದನ್ನು ಪ್ರಶ್ನಿಸುವವರಿಲ್ಲ. ಇಂತಹವರನ್ನು ಶಿಕ್ಷಿಸಬೇಕು. ಅನಾಥವಾಗಿರುವ ಸತ್ಯ ಮತ್ತು ನ್ಯಾಯಕ್ಕೆ ವಿದ್ಯಾವಂತರು ಜೀವ ತುಂಬುವ ಕೆಲಸ ಮಾಡಬೇಕು. ಇದಕ್ಕಾಗಿಯಾದರೂ ಅನ್ಯಾಯ-ಅಕ್ರಮಗಳನ್ನು ವಿರೋಧಿಸಬೇಕು. ಆದರೆ ಎಲ್ಲರೂ ಲಾಭದ ಹಂಗಿನಿಂದ ಜೀವನ ನಡೆಸುತ್ತಿರುವುದರಿಂದ ಯಾರೂ ನಿಷ್ಠುರ ಕಟ್ಟಿಕೊಳ್ಳಲು ತಯಾರಿಲ್ಲ. ಈ ಸ್ಥಿತಿ ಬದಲಾಗಬೇಕು. ವಿದ್ಯಾವಂತರು ಪ್ರತಿಯೊಬ್ಬರ ತಪ್ಪನ್ನು ಪ್ರಶ್ನಿಸುವ ನೈತಿಕತೆ ಹಾಗೂ ಧೈರ್ಯ ತಾಳಬೇಕು ಎಂದು ಕರೆ ನೀಡಿದರು.

## ■ ಎಲ್ಲರೂ ಪ್ರಚಾರಪ್ರಿಯರು

ಜನ ಬದುಕಿದ್ದಾಗ ಅವರ ಪ್ರಯೋಜನವನ್ನು ಗುರುತಿಸದ ಹುಚ್ಚು ಜನರೇ ಹೆಚ್ಚು. ಗಾಂಧೀವಾದವನ್ನು ಸದ್ದು-ಗದ್ದಲವಿಲ್ಲದೆ ಪ್ರಚುರಪಡಿಸಿದ ದಾಸೇಗೌಡರ ಶ್ರಮವನ್ನು ಜನ ಗುರುತಿಸಲಿಲ್ಲ. ಆದರೆ ಈಗ ಅವರ ಮಹತ್ವ ಅರಿವಿಗೆ ಬರುತ್ತಿದೆ. ಇಂತಹವರ ಮಧ್ಯೆ ಪ್ರಚಾರಪ್ರಿಯರ ಮೇಲಾಟ ಹೆಚ್ಚಾಗಿರುವುದು ನಿಜಕ್ಕೂ ವಿಪರ್ಯಾಸದ ಸಂಗತಿ. ಆಂದೋಲನ, ಚಳವಳಿಗಳ ಸಂದರ್ಭದಲ್ಲಿ ಮಾಧ್ಯಮದ ಮುಂದೆ ಪೋಸು ನೀಡುವ ಅನೇಕ ಮಂದಿ ಕಡೆಯವರೆಗೂ ಇರುವುದೇ ಇಲ್ಲ. ಎಲ್ಲರೂ ಪ್ರಚಾರಪ್ರಿಯರಾಗಿದ್ದಾರೆ ಎಂದು ಬೇಸರ ವ್ಯಕ್ತಪಡಿಸಿದರು.

## ■ ದೇವಲೋಕದಿಂದ ಇಳಿದು ಬಂದಿಲ್ಲ

ಜೀವನದಲ್ಲಿ ಕಣ್ಣಿನಿಂದ ಕಂಡ ಸತ್ಯ ಮತ್ತು ಕಾಣದ ಸತ್ಯಕ್ಕೂ ಸಾಕಷ್ಟು ವ್ಯತ್ಯಾಸವಿದೆ. ದೊಡ್ಡ ಮನುಷ್ಯರಂತೆ ಕಾಣುವ ಮಂದಿ ಸಮೀಪದಿಂದ ಸಣ್ಣವರಾಗಿ ಕಾಣುತ್ತಾರೆ. ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಂಡವರ ಹಣೆಬರಹವೇ ಹೀಗೆ. ಅದರಲ್ಲೂ ಸಾಹಿತಿಗಳ ಬರಹಕ್ಕೂ ಜೀವನಶೈಲಿಗೂ ಹೊಂದಾಣಿಕೆಯೇ ಇರುವುದಿಲ್ಲ. ಅವರು ಬರೆದದ್ದನ್ನು ಓದಬೇಕೆ ಹೊರತು ಜೀವನಧಾರೆಯನ್ನು ಅಳವಡಿಸಿಕೊಳ್ಳಲು ಸಾಧ್ಯವಿಲ್ಲ. ಅವರು ದೇವಲೋಕದಿಂದ ಇಳಿದು ಬಂದವರೂ ಅಲ್ಲ ಎಂದು ಮಾರ್ಮಿಕವಾಗಿ ನುಡಿದರು.

## ■ ಗಾಂಧೀವಾದದ ಮಹತ್ವ ಅರಿಯಿರಿ

ಗಾಂಧೀಜಿ ಅವರ ನಡೆ-ನುಡಿ ವಿಚಾರಧಾರೆಗಳನ್ನು ಅನುಸರಿಸುವುದು ನಿಜಕ್ಕೂ ಕಷ್ಟ. ಆದರೆ ಹೊರದೇಶದಲ್ಲಿ ಗಾಂಧೀಜಿಯ ವಿಚಾರಧಾರೆಗಳು ಸಾಕಷ್ಟು ಪ್ರಚಲಿತದಲ್ಲಿವೆ. ಭಾರತದಲ್ಲೂ ಇತ್ತೀಚಿನ ಪೀಳಿಗೆಯಲ್ಲಿ ಗಾಂಧಿವಾದ ನೆಲೆಯೂರುತ್ತಿದೆ. ಯುವ ಪೀಳಿಗೆ ಹಾದಿ ತಪ್ಪುತ್ತಿದೆ ಎಂದು ಜರಿಯುವ ಮುನ್ನ ಹಿರಿಯರು ಸರಿದಾರಿಯಲ್ಲಿ ನಡೆಯಬೇಕು. ಗಾಂಧೀಜಿ ವಿಚಾರಧಾರೆಗಳನ್ನು ಅಳವಡಿಸಿಕೊಳ್ಳುವ ಪ್ರಯತ್ನ ಮಾಡಬೇಕು ಎಂದು ಕಿವಿಮಾತು ಹೇಳಿದರು.

ಇದೇ ಸಂದರ್ಭದಲ್ಲಿ ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, ಕೇಂದ್ರ ರೇಷ್ಮೆ ಮಂಡಳಿ ಅಧ್ಯಕ್ಷ ಎಚ್. ಹನುಮಂತಪ್ಪ, ಉದ್ಯಮಿ ವೂಡೆ ಪಿ. ಕೃಷ್ಣ ಸೇರಿದಂತೆ ಇನ್ನಿತರರು ದಾಸೇಗೌಡರ ಸೇವೆಯನ್ನು ಸ್ಮರಿಸಿದರು.



ಬೆಂಗಳೂರು: ಗಾಂಧಿಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಗಾಂಧಿವಾದಿ ಪ್ರೊ. ಎಚ್. ಆರ್. ದಾಸಪ್ಪ ಶ್ರದ್ಧಾಂಜಲಿ ಸಭೆಯನ್ನು ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹೊ. ಶ್ರೀನಿವಾಸಯ್ಯ, ನ್ಯಾಯಮೂರ್ತಿ ಎ.ಜೆ. ಸದಾಶಿವ, ಹನುಮಂತಪ್ಪ, ವೂಡೆ ಪಿ. ಕೃಷ್ಣ ಉಪಸ್ಥಿತರಿದ್ದರು.

# ಸಮಾಜಕ್ಕೆ ವಿದ್ಯಾವಂತರೇ ಶತ್ರು: ಪಾಪು

• ವಿಕ ಸುದ್ದಿಲೋಕ ಬೆಂಗಳೂರು

ಪ್ರಸ್ತುತ ಸಮಾಜಕ್ಕೆ ವಿದ್ಯಾವಂತರೇ ಶತ್ರುಗಳಾಗುತ್ತಿದ್ದಾರೆ ಎಂದು ಡಾ. ಪಾಟೀಲ ಪುಟ್ಟಪ್ಪ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಏರ್ಪಡಿಸಿದ್ದ ಪ್ರೊ. ಎಚ್. ಆರ್. ದಾಸೇಗೌಡರಿಗೆ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಭಾನುವಾರ ಮಾತನಾಡಿದರು.

ವಿದ್ಯಾವಂತರ ಪ್ರಮಾಣ ಶೇ. 74 ರಷ್ಟಿದ್ದು, ಯಾವುದೇ ಅನ್ಯಾಯ, ಅಕ್ರಮ ನಡೆದಾಗ ಬಾಯಿ ಬಿಡುತ್ತಿಲ್ಲ. ಪ್ರತಿಭಟಿಸದೆ ಹೇಡಿಗಳಾಗುತ್ತಿದ್ದಾರೆ. ಮಾತನಾಡಬೇಕಿದ್ದರೆ ಇದರಿಂದ ನನಗೇನು ಸಿಗುತ್ತದೆ ಎಂದು ನೋಡುತ್ತಾರೆ. ಲಾಭವಿಲ್ಲ ಎಂದಾದರೆ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಾರೆ ಎಂದರು.

ಇಂತಹವರ ಸಾಲಿನಲ್ಲಿ ಸಾಹಿತಿ, ವಕೀಲ ಮುಂತಾದ ವೃತ್ತಿಯವರೂ ಸೇರುತ್ತಾರೆ. ಸಾಹಿತಿಗಳು ಬರೆದಿದ್ದನ್ನು ಬದುಕಿಗೆ ಸಂಬಂಧ ಇಲ್ಲ ಎನ್ನುವಂತೆ ಮಾತ್ರ ಓದಬೇಕು. ಅವರ ಜೀವನ, ಬದುಕುತ್ತಾರೆ. ನನ್ನ ಸ್ನೇಹಿತರು ನೋಡಬಾರದು. ಬರವಣಿಗೆ ಮತ್ತು ಎಲ್ಲದಕ್ಕೂ ಟೀಕೆ ಮಾಡಿ ನೀವೇಕೆ ಕೆಟ್ಟವರಾಗುತ್ತೀರಿ ಎಂದು ಕೇಳುತ್ತಾರೆ. ಜೀವ ಇರುವವರೆಗೂ ಹೋರಾಟ ಮಾಡುತ್ತೇನೆ. ವಿದ್ಯಾವಂತರು ಸತ್ಯಕ್ಕೆ, ನ್ಯಾಯಕ್ಕೆ ತಮ್ಮನ್ನು ಅರ್ಪಿಸಿಕೊಳ್ಳಬೇಕು ಎಂದರು.

ಮಕ್ಕಳು ಗಾಂಧಿ ಮಾರ್ಗದಲ್ಲಿ ನಡೆಯಬೇಕಾದರೆ ದೊಡ್ಡವರು ಆ ಮಾರ್ಗ ತಪ್ಪಬಾರದು. ದಾಸೇಗೌಡರು ಬದುಕಿನುದ್ದಕ್ಕೂ ಗಾಂಧಿ ಮಾರ್ಗದಲ್ಲಿ ನಡೆದರು. ಸಾರ್ವಜನಿಕ ಬದುಕಿನಲ್ಲಿರುವವರು ಗಾಂಧಿ ಮಾರ್ಗದಲ್ಲಿ ನಡೆಯುವ ಪ್ರಯತ್ನವನ್ನಾದರೂ ಮಾಡಬೇಕು ಎಂದರು.

ನಿವೃತ್ತ ನ್ಯಾ. ವಿ.ಜಿ. ಸದಾಶಿವ, ದಾಸೇಗೌಡರು ತಮ್ಮ ಸಂಪರ್ಕಕ್ಕೆ ಬಂದ ವ್ಯಕ್ತಿಗಳನ್ನು ಮತ್ತಷ್ಟು ಕ್ರಿಯಾಶೀಲರಾಗಿ ಮಾಡುತ್ತಿದ್ದರು. ಎಲ್ಲ ಶಿಕ್ಷಣ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಅವರ ನಿರ್ಗಮನದಿಂದ ಖಾಲಿ ವಾತಾವರಣ ಸೃಷ್ಟಿಯಾಗಿದೆ ಎಂದರು.

ಕೇಂದ್ರ ರೇಷ್ಮೆ ಮಂಡಳಿ ಅಧ್ಯಕ್ಷ ಎಚ್. ಹನುಮಂತಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಜಂಟಿ ಕಾರ್ಯದರ್ಶಿ ಡಿ.ಕೆ. ಕೋದಂಡರಾಮು, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಉಪಸ್ಥಿತರಿದ್ದರು.



ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಪ್ರೊ. ಎಚ್. ಆರ್. ದಾಸೇಗೌಡ ಛಾಯಾಚಿತ್ರಗಳನ್ನು ಡಾ. ಪಾಟೀಲ ಪುಟ್ಟಪ್ಪ ವೀಕ್ಷಿಸುತ್ತಿರುವುದು.



ನಗರದ ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿದ್ದ ಪ್ರೊ. ಎಚ್. ಆರ್. ದಾಸೇಗೌಡರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ನಾಡೋಜ ಪಾಟೀಲ ಪುಟ್ಟಪ್ಪ ಅವರು ಸ್ಮಾರಕ ನಿಧಿಯ ಬಿ.ಶ್ರೀನಿವಾಸಯ್ಯ ಪುಷ್ಪನಮನ ಸಲ್ಲಿಸಿದರು.

# ಅನ್ಯಾಯವನ್ನು ಕಂಡು ಕಾಣದಂತೆ ವರ್ತಿಸುವ ಯುವಕರು: ವಿಷಾದ

ಬೆಂಗಳೂರು, ನ.27: ದೇಶದಲ್ಲಿ ವಿದ್ಯಾವಂತರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದ್ದರೂ ಅನ್ಯಾಯ ಕಂಡು ಬಂದಾಗ ಅದನ್ನು ಪ್ರತಿಭಟಿಸುವವರ ಸಂಖ್ಯೆ ಕಡಿಮೆಯಾಗುತ್ತದೆ ಎಂದು ಖ್ಯಾತ ಪತ್ರಕರ್ತ, ಹಿರಿಯ ಗಾಂಧಿವಾದಿ ಹಾಗೂ ನಾಡೋಜ ಪುರಸ್ಕೃತ ಡಾ. ಪಾಟೀಲ್ ಪುಟ್ಟಪ್ಪ ಆತಂಕ ವ್ಯಕ್ತಪಡಿಸಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಹಮ್ಮಿಕೊಳ್ಳಲಾಗಿದ್ದ ಕೀರ್ತಿಶೇಷ ಪ್ರೊ. ಎಚ್. ಆರ್. ದಾಸೇಗೌಡರಿಗೆ ಹಮ್ಮಿಕೊಳ್ಳಲಾಗಿದ್ದ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಸಮೀಕ್ಷೆಯ ಪ್ರಕಾರ ಇಂದು ದೇಶದಲ್ಲಿ ಶೇ.71ರಷ್ಟು ವಿದ್ಯಾವಂತರ ಸಂಖ್ಯೆ ಇದೆ. ಆದರೆ ಯಾರಿಗೆ ಅನ್ಯಾಯವಾದಾಗ ಇದನ್ನು ಕಂಡು ಕಾಣದಂತೆ ವರ್ತಿಸುವವರ ಸಂಖ್ಯೆ ಹೆಚ್ಚಾಗಿದೆ. ಎಲ್ಲರೂ ಬೇರೆಯವರ ಉಸಾಬರಿ ನಮಗೇಕೆ ಎನ್ನುವವರೇ ಹೆಚ್ಚು ಎಂದು ತಿಳಿಸಿದರು.

ಎಲ್ಲಿ ಅನ್ಯಾಯ ಕಂಡುಬರುತ್ತದೆಯೋ ಅಲ್ಲಿ ನಾವು ಅದನ್ನು ಪ್ರತಿಭಟಿಸಬೇಕು. ನಿಜವಾಗಿಯೂ ದೇಶಕ್ಕೆ ಇಂದು ವಿದ್ಯಾವಂತರೇ ಶತ್ರುಗಳಾಗಿದ್ದಾರೆಂದು ಪಾಪು ಕಿಡಿಕಾರಿದರು.

ಸಾಹಿತಿಗಳು, ವಕೀಲರು ಇದಕ್ಕೆ ಹೊರತಾಗಿಲ್ಲ. ಸಾಹಿತಿಗಳು ತಾವು ಬರೆದಿದ್ದನ್ನೇ ಬೇರೆಯವರು ಓದಬೇಕೆಂಬ ಮನೋಭಾವನೆ ಇಟ್ಟುಕೊಂಡಿದ್ದಾರೆ. ಅವರ ಖಾಸಗಿ ಜೀವನದ ಬಗ್ಗೆ ಮಾತನಾಡಿದರೆ ಅದು ಮಹಾ ಅಪರಾಧವಾಗುತ್ತದೆ ಎಂದು ವ್ಯಂಗ್ಯವಾಡಿದರು.

ಪ್ರತಿಭಟನೆ ನಡೆಸಿದರೆ ನಮಗೆ ಆದರಿಂದ ಎಲ್ಲಿ ಅನ್ಯಾಯವಾಗುತ್ತದೆ ಎಂಬ ಆತಂಕ ಕಾಡುತ್ತದೆ. ನನ್ನ ಜೀವನದ ಕೊನೆ ಉಸಿರುವವರೆಗೂ ಹೋರಾಟ ಮಾಡುತ್ತೇನೆಂದು ಪಾಟೀಲ್ ಪುಟ್ಟಪ್ಪ ಹೇಳಿದರು.

ಕೇಂದ್ರ ರೇಷ್ಮೆ ಮಂಡಳಿ ಮಾಜಿ ಅಧ್ಯಕ್ಷ ಎಚ್. ಹನುಮಂತಪ್ಪ ಮಾತನಾಡಿ, ಪ್ರೊ. ಎಚ್. ಆರ್. ದಾಸೇಗೌಡರು ಉತ್ತಮ ಶಿಕ್ಷಕರನ್ನು ಸಮಾಜಕ್ಕೆ ನೀಡಿದ್ದರು. ಬೆಂಗಳೂರಿನಲ್ಲಿರುವ ಎಲ್ಲಾ ಶಿಕ್ಷಣ ಸಂಸ್ಥೆಗಳ ಜೊತೆ ಉತ್ತಮ ಸಂಬಂಧ ಹೊಂದಿದ್ದ ಅವರು ಶಿಕ್ಷಣಕ್ಕೆ ನೀಡಿದ ಕೊಡುಗೆ ಅಪಾರ ಎಂದು ಪ್ರಶಂಸಿದರು.

ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ ಮಾತನಾಡಿ, ಪ್ರೊ. ಎಚ್. ಆರ್. ದಾಸೇಗೌಡರ ನಿಧನ ಸಮಾಜಕ್ಕೆ ತುಂಬಲಾರದ ನಷ್ಟವಾಗಿದೆ. ಗಾಂಧಿ ತತ್ವ ಸಿದ್ಧಾಂತಗಳಿಂದ ಪ್ರೇರಿತವಾಗಿ ಸ್ಥಾಪಿತವಾಗಿರುವ ಸಂಸ್ಥೆಗಳಿಗೂ ಇದು ಅನ್ಯಾಯವಾಗುತ್ತದೆ.

ಜೀವನದಲ್ಲಿ ಯಾವುದೇ ಕೆಲಸವನ್ನು ಅತ್ಯಂತ ಶ್ರದ್ಧೆ, ಪ್ರಾಮಾಣಿಕವಾಗಿ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ ಎಂದರು.

ಪ್ರಜಾವಾಣಿ ಭಾನುವಾರ 13ನೇ ನವೆಂಬರ್ 2011

# 'ರಾಜಕಾರಣಿಗಳಿಂದ ದೇಶದ ಭವಿಷ್ಯ ಮಸುಕು'

ಪ್ರಜಾವಾಣಿ ವಾರ್ತೆ

ತುಮಕೂರು: ಅವ್ಯವಸ್ಥೆ ಜತೆ ರಾಜಿ ಮಾಡಿಕೊಳ್ಳುವ ಕೆಲವು ರಾಜಕಾರಣಿಗಳಿಂದ ದೇಶದ ಭವಿಷ್ಯ ಮಸುಕಾಗುತ್ತಿದೆ ಎಂದು ನಗರಾಭಿವೃದ್ಧಿ ಸಚಿವ ಎಸ್.ಸುರೇಶ್‌ಕುಮಾರ್ ಇಲ್ಲಿ ಶನಿವಾರ ಆತಂಕ ವ್ಯಕ್ತಪಡಿಸಿದರು.

ಬೆಂಗಳೂರು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ರಾಮಕೃಷ್ಣ ವಿವೇಕಾನಂದ ಆಶ್ರಮದಲ್ಲಿ ಶನಿವಾರ ಆಯೋಜಿಸಿದ್ದ 'ಶಿಕ್ಷಣ ಅವಲೋಕನ' ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಆತ್ಮಹತ್ಯೆ ಪ್ರಸ್ತಾಪಿಸಿದ ಅವರು, ಅತ್ಯಂತ ಪಾರದರ್ಶಕವಾಗಿ 2400 ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳನ್ನು ಸರ್ಕಾರ ನೇಮಿಸಿತು. ಗ್ರಾಮಾಭಿವೃದ್ಧಿ ಕನಸು ಹೊತ್ತ ಯುವಕರು ಅವ್ಯವಸ್ಥೆ, ಸ್ವಾರ್ಥ ರಾಜಕಾರಣಿಗಳೊಂದಿಗೆ ರಾಜಿಯಾಗದೆ ರಾಜೀನಾಮೆ ನೀಡುತ್ತಿದ್ದಾರೆ. ಕೆಲವರು ಜೀವನಕ್ಕೆ ವಿದಾಯ ಹೇಳುತ್ತಿದ್ದಾರೆ ಎಂದು ವಿಷಾದಿಸಿದರು.

ಫೇಸ್‌ಬುಕ್‌ನಲ್ಲಿ ಭ್ರಷ್ಟಾಚಾರದ ವಿರುದ್ಧ ಹೋರಾಟದ ರಣಕಹಳೆ ಊದುವವರು ಇಲ್ಲಿನ ವಾಸ್ತವ ಸಂಗತಿಯನ್ನು ಮೊದಲು ಅರಿಯಬೇಕು. ಅಭಿವೃದ್ಧಿ ಕನಸು ಹೊತ್ತ ಯುವಕರು ಏಕೆ ಎದೆಗುಂದುತ್ತಿದ್ದಾರೆ ಎಂದು ಪ್ರಶ್ನಿಸಿಕೊಳ್ಳಬೇಕಿದೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ಡಬ್ಲ್ಯು.ಪಿ.ಕೃಷ್ಣ, ಶಿಕ್ಷಕರು ಹೇಳುವುದನ್ನು ಮಾತ್ರ ವಿದ್ಯಾರ್ಥಿಗಳು ಕೇಳುವುದಿಲ್ಲ. ಶಿಕ್ಷಕರ ನಡವಳಿಕೆಯನ್ನೂ ಸೂಕ್ಷ್ಮವಾಗಿ ಗಮನಿಸುತ್ತಾರೆ. ಶಿಕ್ಷಕರು ಎಚ್ಚರಿಕೆಯಿಂದ ವರ್ತಿಸಬೇಕೆಂದು ಕಿವಿಮಾತು ಹೇಳಿದರು.

ರಾಮಕೃಷ್ಣ ವಿವೇಕಾನಂದ ಆಶ್ರಮದ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಪ್ರಾಧ್ಯಾಪಕ ಡಾ.ಎಚ್.ಎನ್.ಮುರಳೀಧರ್, ಶೇಷಾದ್ರಿಪುರಂ ಶಿಕ್ಷಣ ದತ್ತಿಗೆ ಸೇರಿದ ವಿವಿಧ ಕಾಲೇಜುಗಳ ಪ್ರಾಚಾರ್ಯರಾದ ರಾಧಾಕೃಷ್ಣ, ಡಿ.ಕೆ.ಮಂಜುನಾಥ್, ಡಾ.ಉಮಾದೇವಿ, ಮಹಾಲಕ್ಷ್ಮಿ ಉಪಸ್ಥಿತರಿದ್ದರು.



ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮದಲ್ಲಿ ಶನಿವಾರ ಬೆಂಗಳೂರು 'ಶೇಷಾದ್ರಿಪುರಂ ಶಿಕ್ಷಣ ದತ್ತಿ' ಸಂಸ್ಥೆ ಆಯೋಜಿಸಿದ್ದ 'ಶಿಕ್ಷಣ ಅವಲೋಕನ' ಕಾರ್ಯಕ್ರಮವನ್ನು ನಗರಾಭಿವೃದ್ಧಿ ಸಚಿವ ಎಸ್.ಸುರೇಶ್‌ಕುಮಾರ್ ಉದ್ಘಾಟಿಸಿದರು. ಪ್ರೊ.ಡಾ.ಎಚ್.ಎನ್.ಮುರಳೀಧರ್, ವೀರೇಶಾನಂದ ಸರಸ್ವತಿ ಸ್ವಾಮೀಜಿ, ಡಾ.ಡಬ್ಲ್ಯು.ಪಿ.ಕೃಷ್ಣ ಉಪಸ್ಥಿತರಿದ್ದರು

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ

ದಿನಾಂಕ 13 ನವೆಂಬರ್ 2011 ಭಾನುವಾರ



ರಾಮಕೃಷ್ಣ ವಿವೇಕಾನಂದ ಆಶ್ರಮದಿಂದ ಹಮ್ಮಿಕೊಂಡಿದ್ದ ಶಿಕ್ಷಣ ಅವಲೋಕನ ಕಾರ್ಯಕ್ರಮವನ್ನು ಕಾನೂನು ಸಚಿವ ಎಸ್.ಸುರೇಶ್‌ಕುಮಾರ್ ಉದ್ಘಾಟಿಸಿದರು. ಶ್ರೀ [illegible]ಶಾನಂದ ಸರಸ್ವತಿ ಸ್ವಾಮಿಗಳು, ಪ್ರಾಧ್ಯಾಪಕ ಡಾ|| ಹೆಚ್.ಎನ್.ಮುರುಳೀಧರ್, ಡಾ|| ಡಬ್ಲ್ಯೂ.ಪಿ.ಕೃಷ್ಣ ಉಪಸ್ಥಿತರಿದ್ದರು. (ಚಿತ್ರ: ಟಿ.ಹೆಚ್.ಸುರೇಶ್)

ಸೋಮವಾರ, 24 ಅಕ್ಟೋಬರ್ 2011 | ಕನ್ನಡಪ್ರಭ

# ಕುಂಚಿಟಿಗರ ಪದಾಧಿಕಾರಿಗಳ ಆಯ್ಕೆ

ಕುಂಚಿಟಿಗರ ಸಾರ್ವಜನಿಕ ವಿದ್ಯಾರ್ಥಿನಿಲಯದಲ್ಲಿ ನಡೆದ 2011– 14ನೇ ಸಾಲಿನ ಚುನಾವಣೆಯಲ್ಲಿ ಕೆಳಕಂಡ ಪದಾಧಿಕಾರಿಗಳು ಮತ್ತು ಆಡಳಿತ ಮಂಡಳಿ ಸದಸ್ಯರನ್ನು ಅವಿರೋಧವಾಗಿ ಆಯ್ಕೆ ಮಾಡಲಾಗಿದೆ.

**ಪದಾಧಿಕಾರಿಗಳು:** ಅಧ್ಯಕ್ಷರು– ಟಿ.ವಿ. ಮಾರುತಿ, ಉಪಾಧ್ಯಕ್ಷರು–ಕೆ.ಪಿ.ನರಸಿಂಹಮೂರ್ತಿ, ಕಾರ್ಯದರ್ಶಿ–ಕೆ.ಸಿ.ಎನ್. ಚಂದ್ರಶೇಖರ್, ಜಂಟಿ ಕಾರ್ಯದರ್ಶಿ–ಮಾಸ್ತಿ ಸೋಮಶೇಖರ್, ಖಜಾಂಚಿ–ಬಿ.ಎಂ. ಪಾರ್ಥಸಾರಥಿ, ಲೆಕ್ಕ ಪರಿಶೋಧಕ–ಕೆ. ಕೃಷ್ಣಸ್ವಾಮಿಯವರನ್ನು ಆಯ್ಕೆ ಮಾಡಲಾಗಿದೆ.

**ಆಡಳಿತ ಮಂಡಳಿ ಸದಸ್ಯರು:** ಎಚ್.ಎನ್. ಮುದ್ದುಕೃಷ್ಣ, ಡಬ್ಲ್ಯೂ.ಪಿ. ಸುರೇಶ್‌ಕುಮಾರ್, ಡಬ್ಲ್ಯೂ.ಪಿ. ಶಿವಕುಮಾರ್, ಬಿ.ಸಿ. ಶಿವರಾಜ್, ಡಬ್ಲ್ಯೂ.ಜಿ. ರಾಮಕೃಷ್ಣ, ಎಂ.ಎಂ.ಟಿ. ರವಿ ಘಂದಾಲಪ್ಪ, ತಾರಾ ರಾಮಚಂದ್ರ, ಡಬ್ಲ್ಯೂ.ಎ. ಧ್ರುವಕುಮಾರ್, ಎಸ್.ಮಂಜುನಾಥ್, ಸಿ.ಪುರುಶೋತ್ತಮ್, ಎನ್.ಎಂ.ಮಧುಸೂದನಗೌಡ, ಟಿ.ವಿ.ಶ್ರೀರಾಮ್, ವೂಡೆ ಪಿ.ಕೃಷ್ಣ, ಬಿ.ಎಂ. ರಾಜಗೋಪಾಲ್, ಆರ್.ವಿ.ವಿಜಯ್ ಭಾಸ್ಕರ್, ಮಾಸ್ತಿ ವಿವೇಕ್, ಎಂ.ಎಂ.ಟಿ.ಮುನಿಸ್ವಾಮಪ್ಪ, ಬಿ.ಆರ್. ವಿಶ್ವನಾಥ್, ಹನು ಬೋರಣ್ಣ, ಪಿ.ಸಿ.ನಾರಾಯಣ್ ಮತ್ತು ಕೆ.ಸಿ.ಎನ್.ಮೋಹನ್ ಆಯ್ಕೆಯಾಗಿದ್ದಾರೆ.

ಈ ಸಂಜೆ

ಭಾನುವಾರ, 23 ಅಕ್ಟೋಬರ್, 2011



ಡಾ. ಶ್ರೀನಿವಾಸ್ ಅವರು ಯು.ಆರ್. ಅನಂತಮೂರ್ತಿ ಅವರ ಕುರಿತು ಬರೆದ ಪುಸ್ತಕವನ್ನು ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ ಬಿಡುಗಡೆ ಮಾಡಿದರು. ಡಾ. ಅನಂತಮೂರ್ತಿ, ವೂಡೆ ಪಿ. ಕೃಷ್ಣ ಉಪಸ್ಥಿತರಿದ್ದರು.

ಪ್ರಜಾವಾಣಿ
ಭಾನುವಾರ 23ನೇ ಅಕ್ಟೋಬರ್ 2011

# ‘ಎಲ್ಲ ಸಾಹಿತಿಗಳಿಗೂ ಜ್ಞಾನಪೀಠ ಪ್ರಶಸ್ತಿ ಅಸಾಧ್ಯ’

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಜ್ಞಾನಪೀಠ ಪ್ರಶಸ್ತಿ ಕೆಲವು ಕಾರಣಗಳಿಗಾಗಿ ಎಷ್ಟೋ ಬಾರಿ ಅರ್ಹರಿಗೆ ಸಿಗುವುದಿಲ್ಲ. ಹಾಗೆಂದು ಅದು ಅಯೋಗ್ಯರಿಗೂ ಸಿಗಬಾರದು' ಎಂದು ತಿ ಡಾ.ಯು.ಆರ್.ಅನಂತಮೂರ್ತಿ ದರು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸ್ನಾತಕೋತ್ತರ ಕೇಂದ್ರ ಹಾಗೂ ಕನ್ನಡ ವಿಭಾಗದ ಸಂಯುಕ್ತ ಆಶ್ರಯದಲ್ಲಿ ನಗರದಲ್ಲಿ ಶನಿವಾರ ಏರ್ಪಡಿಸಿದ್ದ 'ಯು.ಆರ್. ಅನಂತಮೂರ್ತಿ-ಸಾಹಿತ್ಯ ಚಿಂತನ' ವಿಚಾರ ಸಂಕಿರಣದಲ್ಲಿ ಅವರು ಮಾತನಾಡಿದರು.

'ನನಗೆ ಜ್ಞಾನಪೀಠ ಪ್ರಶಸ್ತಿ ಬಂದಾಗ ಕೊಂಚ ಗಲಿಬಿಲಿಯಾಯಿತು. ನನಗಿಂತ ಈ ಪ್ರಶಸ್ತಿಗೆ ಹೆಚ್ಚು ಅರ್ಹರಾದ ಪು.ತಿ. ನರಸಿಂಹಾಚಾರ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರಂಥ ಸಾಹಿತಿಗಳಿದ್ದರು. ಆದರೆ ಎಲ್ಲ ಉತ್ತಮ ಸಾಹಿತಿಗಳಿಗೂ ಪೀಠ ಸಿಗುವುದಿಲ್ಲ' ಎಂದರು.

'ಕುವೆಂಪು ಅವರು ವಿಕಾಸದಲ್ಲಿ ನಂಬಿಕೆ ಇಟ್ಟು ಸಾಹಿತ್ಯ ರಚನೆ ಮಾಡಿದರು. ಆದರೆ ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿಗೆ ಆಯ್ಕೆಯಾದ ಡಾ.ಚಂದ್ರಶೇಖರ ಕಂಬಾರರು ತಮ್ಮ ಕೃತಿಯೊಂದರಲ್ಲಿ ಶಾಲೆ ಬಂದುದರಿಂದ ಹಳ್ಳಿಯೊಂದು ಹಾಳಾಯಿತು ಎಂಬ ಬಗ್ಗೆ ಬರೆದಿದ್ದಾರೆ. ಅಂದರೆ ವಿಕಾಸದ ಬಗ್ಗೆ ಅನುಮಾನ ಇಟ್ಟುಕೊಂಡೇ ಬರೆದಿದ್ದಾರೆ. ಕುವೆಂಪು ಮತ್ತು ಕಂಬಾರ ಇಬ್ಬರೂ ಶೂದ್ರ ಪ್ರತಿಭೆಗಳು. ಆದರೆ ನಿಲುವುಗಳು ವಿಭಿನ್ನವಾಗಿವೆ. ಇಂಥ ವಿಚಾರಗಳ ಬಗ್ಗೆ ಚಿಂತನೆ ನಡೆಯಬೇಕು' ಎಂದು ಸಲಹೆ ನೀಡಿದರು.




ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಶೇಷಾದ್ರಿಪುರಂ ಕಾಲೇಜಿನ ಆಶ್ರಯದಲ್ಲಿ ನಗರದಲ್ಲಿ ಶನಿವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ 'ಯು.ಆರ್.ಅನಂತಮೂರ್ತಿ' ಎಂಬ ಕೃತಿಯನ್ನು ಹಿರಿಯ ಸಾಹಿತಿ ಜಿ.ಎಸ್.ಸಿದ್ಧಲಿಂಗಯ್ಯ ಅವರು ಬಿಡುಗಡೆ ಮಾಡಿ ಪ್ರತಿಯನ್ನು ಅನಂತಮೂರ್ತಿ ಅವರಿಗೆ ನೀಡಿದರು. ಅಕಾಡೆಮಿ ಅಧ್ಯಕ್ಷ ಪ್ರೊ. ಎಂ.ಎಚ್.ಕೃಷ್ಣಯ್ಯ ಹಾಗೂ ಕೃತಿಯ ಲೇಖಕ ಶೂದ್ರ ಶ್ರೀನಿವಾಸ್ ಚಿತ್ರದಲ್ಲಿದ್ದಾರೆ —ಪ್ರಜಾವಾಣಿ ಚಿತ್ರ

ಅಕಾಡೆಮಿ ಪ್ರಕಟಿಸಿದ ಶೂದ್ರ ಶ್ರೀನಿವಾಸ್ ಅವರ 'ಯು.ಆರ್. ಅನಂತಮೂರ್ತಿ' ಕೃತಿಯನ್ನು ಬಿಡುಗಡೆ ಮಾಡಿದ ಹಿರಿಯ ಸಾಹಿತಿ ಜಿ.ಎಸ್.ಸಿದ್ಧಲಿಂಗಯ್ಯ ಅವರು ಮಾತನಾಡಿ, 'ಯಾರೇ ಬರೆದ ಕೃತಿಯನ್ನು ತಮ್ಮದೆಂಬಂತೆ ಪರಿಗಣಿಸುವ ಸಹೃದಯತೆ ಬೇಂದ್ರೆ ಮತ್ತು ಅನಂತಮೂರ್ತಿ ಅವರಿಗಿದೆ. ಶೂದ್ರ ಅವರು ಬರೆದ ಕೃತಿಯಲ್ಲಿ ಅನಂತಮೂರ್ತಿ ಅವರ ಕಥೆ, ಕಾದಂಬರಿ, ಅನುವಾದ, ವೈಚಾರಿಕತೆಗಳ ವಿಶ್ಲೇಷಣೆ ಮಾಡಲಾಗಿದೆ. ನಂತರದ ಅಧ್ಯಾಯಗಳಲ್ಲಿ ಅವರ ಜೀವನದ ಪ್ರಮುಖ ಘಟನೆಗಳನ್ನು ನೆನಪಿಸಿಕೊಳ್ಳಲಾಗಿದೆ' ಎಂದರು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪ್ರೊ.ಎಂ.ಎಚ್.ಕೃಷ್ಣಯ್ಯ ಮಾತನಾಡಿ, 'ಅನಂತಮೂರ್ತಿ ಅವರು ವರ್ತಮಾನ ಪ್ರಜ್ಞೆಯ ಸಂಕೇತವಾಗಿದ್ದಾರೆ. ಬದಲಾದ ಸನ್ನಿವೇಶಕ್ಕೆ ತಕ್ಕಂತೆ ಸ್ಪಂದಿಸುತ್ತಿದ್ದಾರೆ. ರಾಜ್ಯ ಸರ್ಕಾರ ಶಾಲೆಗಳನ್ನು ಮುಚ್ಚುವ ಬಗೆಗೆ ತಮ್ಮ ನಿಲುವನ್ನು ಪ್ರಕಟಿಸಿರುವ ಅವರು, ಕನ್ನಡ ಶಾಲೆಗಳನ್ನು ನಡೆಸಲು ಅಗತ್ಯವಿರುವ ಸಲಹೆ, ಪರಿಹಾರಗಳನ್ನೂ ಸೂಚಿಸಿದ್ದಾರೆ' ಎಂದು ಹೇಳಿದರು.

ಲೇಖಕ ಶೂದ್ರ ಶ್ರೀನಿವಾಸ್, 'ಅನಂತಮೂರ್ತಿ ಕೃತಿಗಳ ವ್ಯಾಪ್ತಿ ಅಗಾಧವಾದುದು. ಕೇವಲ 250 ಪುಟಗಳಲ್ಲಿ ಅವರ ಎಲ್ಲ ಕೃತಿ, ಕಾದಂಬರಿಗಳ ಬಗ್ಗೆ ಬರೆಯುವುದು ಅಸಾಧ್ಯವಾದುದು. ಅವರ ಸಾಹಿತ್ಯದ ಮೂಲಕವೇ ಜಗತ್ತಿನ ಸಾಹಿತ್ಯದ ಅರಿವು ದೊರಕಿತು. ಕನ್ನಡ ಸಾಹಿತ್ಯದ ಸಹೋದ್ಯೋಗಿಗಳೆಂದರೆ ಲಂಕೇಶ್ ಮತ್ತು ಅನಂತಮೂರ್ತಿ' ಎಂದು ನುಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಪ್ರೊ.ಎಂ.ಡಿ.ರಾಜನ್, ಅಕಾಡೆಮಿ ರಿಜಿಸ್ಟ್ರಾರ್ ಪಿ.ಎನ್.ಮಲ್ಲಿಕಾರ್ಜುನಸ್ವಾಮಿ ವೇದಿಕೆಯಲ್ಲಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

23-10-2011

# 'ಅಯೋಗ್ಯರಿಗೆ ಜ್ಞಾನಪೀಠ ಬೇಡ'



ಬೆಂಗಳೂರು, ಅ. 22: ಜ್ಞಾನಪೀಠ ಪ್ರಶಸ್ತಿ ಯಾರಿಗಾದರೂ ಬರಲಿ ಆದರೆ, ಅಯೋಗ್ಯರಿಗೆ ಮಾತ್ರ ಬರಬಾರದು ಎಂದು ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿ ಡಾ. ಯು.ಆರ್. ಅನಂತಮೂರ್ತಿ ಅಭಿಪ್ರಾಯಪಟ್ಟರು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಕನ್ನಡ ಸ್ನಾತಕೋತ್ತರ ಕೇಂದ್ರ ಮತ್ತು ಕನ್ನಡ ವಿಭಾಗ ನಗರದ ಶೇಷಾದ್ರಿಪುರಂ ಕಾಲೇಜಿನ ನೂತನ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ 'ಡಾ. ಯು. ಆರ್. ಅನಂತಮೂರ್ತಿ-ಸಾಹಿತ್ಯ ಚಿಂತನ' ವಿಚಾರ ಸಂಕಿರಣದಲ್ಲಿ ಅವರು ಮಾತನಾಡುತ್ತಿದ್ದರು.

ಪು.ತಿ. ನರಸಿಂಹಾಚಾರ್, ಪೂರ್ಣಚಂದ್ರ ತೇಜಸ್ವಿ, ಗೊ.ರು. ರಾಮಸ್ವಾಮಿ ಅಯ್ಯಂಗಾರ್ ಅವರಂತಹ ಘಟಾನುಘಟಿ ಯೋಗ್ಯ ಸಾಹಿತಿಗಳಿದ್ದರೂ ನನ್ನಂತಹವನಿಗೆ ಜ್ಞಾನಪೀಠ ಪ್ರಶಸ್ತಿ ಸಿಕ್ಕಿತು. ಆದರೆ ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿ ಎಂದಾಕ್ಷಣ ಗಲಿಬಿಲಿಯಾಗುತ್ತದೆ. ಈ ಪ್ರಶಸ್ತಿ ಯಾರಿಗಾದರೂ ಸಿಗಲಿ ಆದರೆ ಅಯೋಗ್ಯರಿಗೆ ಸಿಗಬಾರದು ಎಂಬುದು ನನ್ನ ಅಭಿಪ್ರಾಯ ಎಂದರು.

ಬರಹಗಾರನಿಗೆ ಬೆಳವಣಿಗೆ, ವಿಕಾಸದಲ್ಲಿ ನಂಬಿಕೆಯಿಟ್ಟುಕೊಂಡಿದ್ದ ಶೂದ್ರ ಪ್ರತಿಭೆ ಕುವೆಂಪು ಹಾಗೂ ವಿಕಾಸದ ಬಗ್ಗೆ ಅನುಮಾನ ಇರುವ ಮತ್ತೊಬ್ಬ ಶೂದ್ರ ಪ್ರತಿಭೆ ಚಂದ್ರಶೇಖರ ಕಂಬಾರರಂತಹ ವಿಭಿನ್ನ ಪ್ರತಿಭೆಗಳಿಗೆ ಜ್ಞಾನಪೀಠ ಪ್ರಶಸ್ತಿಯ ಗೌರವ ಸಂದಿದೆ. ಯಾವಾಗಲೂ ಲೇಖಕರು ಚರ್ಚೆಯ ಮುಖಾಂತರ ಬದುಕಿ ಉಳಿಯಬೇಕು. ಆದರೆ ಕನ್ನಡ ಸಾಹಿತ್ಯಲೋಕದಲ್ಲಿ ಈ ಪ್ರಯತ್ನ ನಡೆಯುತ್ತಿಲ್ಲ ಇಲ್ಲ ಎಂದು ಮಾರ್ಮಿಕವಾಗಿ ನುಡಿದರು.

ಸಾಹಿತ್ಯಲೋಕದಲ್ಲಿ ನನಗಿಂತ ಬಹಳಷ್ಟು ಮಂದಿ ದೊಡ್ಡ ಸಾಹಿತಿಗಳಿದ್ದಾರೆ. ನಾನು ಯಾರನ್ನೂ ಹೊಗಳುವುದಿಲ್ಲ. ಎಲ್ಲವನ್ನೂ ವಿಮರ್ಶಾತ್ಮಕವಾಗಿ ಗ್ರಹಿಸುತ್ತೇನೆ. ಹೀಗಾಗಿಯೇ ನನ್ನನ್ನು ಹೊಗಳುವವರಿಗಿಂತ ದ್ವೇಷಿಸುವವರೇ ಹೆಚ್ಚು. ಅದರಲ್ಲೂ ನನ್ನ ಮಕ್ಕಳೇ ಕಟು ವಿಮರ್ಶಕರು ಎಂದು ಚಟಾಕಿ ಹಾರಿಸಿದ ಅನಂತಮೂರ್ತಿ, ನಾನು ಯಾರಿಗೂ ಭಯಹುಟ್ಟಿಸದಂತೆ ಬದುಕುತ್ತಿದ್ದೇನೆ. ಈ ಧೋರಣೆಯ ಪರ-ವಿರೋಧ ಪುಸ್ತಕಗಳು ಪ್ರಕಟವಾದರೆ ಸ್ವಾಗತಾರ್ಹ ಎಂದು ಹೇಳಿದರು.

**■ ಸಾಹಿತ್ಯಪ್ರೇಮಿ ಅನಂತಮೂರ್ತಿ**

ಇದಕ್ಕೂ ಮುನ್ನ ಮಾತನಾಡಿದ ಸಾಹಿತಿ ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ, ಅನಂತಮೂರ್ತಿ ಅವರು ಬೇರೆ ಸಾಹಿತಿಗಳ ಸಾಹಿತ್ಯಕೃತಿಯನ್ನು ಮೆಚ್ಚುವ ಸಾಹಿತ್ಯಪ್ರೇಮಿ. ಜೀವನ ಪ್ರೀತಿ ಮತ್ತು ವಾಂಗ್ಮಯತೆಯುಳ್ಳವರು. ಅನಂತಮೂರ್ತಿ ಅವರದ್ದು ಅದಮ್ಯ ಜೀವನ. ಆದರೆ ಇತ್ತೀಚಿನ ದಿನಗಳಲ್ಲಿ ತಮ್ಮ ವಾಕ್‌ಶಕ್ತಿ ಮೂಲಕ ವಿದ್ಯಾರ್ಥಿಗಳನ್ನು ಮಂತ್ರಮುಗ್ಧವಾಗಿಸುವ ಅಧ್ಯಾಪಕರು ವಿರಳ. ಆದರೆ ಅನಂತಮೂರ್ತಿ ಅವರಲ್ಲಿ ಇಂದಿಗೂ ಆ ಧೀಶಕ್ತಿ ಇದೆ ಎಂದು ಕೊಂಡಾಡಿದರು.

**■ ಕನ್ನಡದ ಇಬ್ಬರು ಸವತಿಯರು**

ಲೇಖಕ ಶೂದ್ರ ಶ್ರೀನಿವಾಸ್ ಮಾತನಾಡಿ, ಕನ್ನಡ ಸಾಹಿತ್ಯಲೋಕದಲ್ಲಿ ಪಿ. ಲಂಕೇಶ್ ಮತ್ತು ಡಾ. ಯು.ಆರ್. ಅನಂತಮೂರ್ತಿ ಅವರು ಸವತಿಯರಿದ್ದಂತೆ. ಅವರ ಆಲೋಚನಾ ಕ್ರಮದಿಂದಾಗಿ ಪ್ರೇರಿತನಾದ ನಾನು ಇದೀಗ ಅವರ ಬಗ್ಗೆಯೇ ಕೃತಿ ರಚಿಸಿದ್ದೇನೆ. ಇದು ನಿಜಕ್ಕೂ ಹೆಮ್ಮೆಯ ಸಂಗತಿ. ಮುಂದಿನ ದಿನಗಳಲ್ಲಿ ಅನಂತಮೂರ್ತಿ ಅವರ ಅವಸ್ಥೆ ಕೃತಿ ಕುರಿತು ಬರೆಯುವ ಅಭಿಲಾಷೆ ಇದೆ. ಅವರ ಅತ್ಯುತ್ತಮ ಕೃತಿಗಳನ್ನು ಜನರ ಮನಸ್ಸಿನಿಂದ ಕಿತ್ತೊಗೆಯುವ ಮನಸುಗಳು ಕನ್ನಡದಲ್ಲಿ ಹೆಚ್ಚಾಗಿರುವುದು ಬೇಸರದ ಸಂಗತಿ ಎಂದರು.

**■ ವರ್ತಮಾನ ಪ್ರಜ್ಞೆಯ ಸಂಕೇತ**

ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪ್ರೊ. ಎಂ.ಎಚ್. ಕೃಷ್ಣಯ್ಯ ಮಾತನಾಡಿ, ಡಾ. ಯು.ಆರ್. ಅನಂತಮೂರ್ತಿ ಅವರ ವರ್ತಮಾನ ಪ್ರಜ್ಞೆಯ ಸಂಕೇತ. ಬದಲಾದ ಸಂದರ್ಭಗಳಲ್ಲಿ ಬದಲಾದ ಪ್ರಶ್ನೆಗಳಿಗೆ ನಿತ್ಯ ಸೃಜನಶೀಲವಾಗಿ ಸ್ಪಂದಿಸುವ ಅನಂತಮೂರ್ತಿ ಅವರು ಧರ್ಮ-ಮತ ಎಲ್ಲದರ ಹಿನ್ನೆಲೆಯಲ್ಲೂ ಚಿಂತಿಸಿ ಸ್ಪಂದಿಸುವವಂತಹವರು ಎಂದು ಶ್ಲಾಘಿಸಿದರು.

ಸಮಾರಂಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಕಾಲೇಜಿನ ಪ್ರಾಂಶುಪಾಲ ಪ್ರೊ. ಎಂ.ಡಿ. ರಾಜನ್, ಸಾಹಿತ್ಯ ಅಕಾಡೆಮಿ ರಿಜಿಸ್ಟ್ರಾರ್ ವಿ.ಎನ್. ಮಲ್ಲಿಕಾರ್ಜುನಸ್ವಾಮಿ ಉಪಸ್ಥಿತರಿದ್ದರು.

ಉದಯವಾಣಿ

ಶುಕ್ರವಾರ | ಅಕ್ಟೋಬರ್ | 7 | 2011

ವಿಚಾರ ಸಂಕಿರಣ ■ ಗಾಂಧೀಜಿ ಹಾಕಿಕೊಟ್ಟ ಹಾದಿ ಗಟ್ಟಿಯಾದುದು

# ಸತ್ಯ ಮತ್ತು ಅಹಿಂಸೆ ಮೂಲಕ ಪ್ರಪಂಚ ಗೆದ್ದ ಗಾಂಧಿ

ಬೆಂಗಳೂರು: ಸತ್ಯ ಮತ್ತು ಅಹಿಂಸೆ ಮೂಲಕ ಆಧ್ಯಾತ್ಮಿಕ ಸಂತರಾಗಿ ಪ್ರಪಂಚ ಗೆದ್ದವರು ಮಹಾತ್ಮಗಾಂಧಿ. ಅವರ ವಿಚಾರಧಾರೆಗಳು ಇಂದಿನ ಸಮಾಜಕ್ಕೆ ಹೆಚ್ಚು ಪ್ರಸ್ತುತವಾಗಿವೆ ಎಂದು ವಿಚಾರವಾದಿ ಡಾ.ಹನುಮಂತಯ್ಯ ವಿಶ್ಲೇಷಿಸಿದರು.

ನಗರದ ಶೇಷಾದ್ರಿಪುರಂ ಪ.ಪೂ. ಕಾಲೇಜಿನಲ್ಲಿ ಈಚೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಸಂಯುಕ್ತವಾಗಿ ಗಾಂಧಿ ಜಯಂತಿ ಅಂಗವಾಗಿ ಹಮ್ಮಿಕೊಂಡಿದ್ದ ರಾಜ್ಯಮಟ್ಟದ ವಿಚಾರ ಸಂಕಿರಣ ಮತ್ತು ಕವಿಗೋಷ್ಠಿಯಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಸಮಾಜದಲ್ಲಿ ಕಡೆಗಣಿಸಲ್ಪಟ್ಟ ಕಡೆಯ ವ್ಯಕ್ತಿಯ ಏಳಿಗೆಗೆ ಶ್ರಮಿಸುವುದೇ ನಿಜವಾದ ಮಾನವೀಯತೆಯ ಲಕ್ಷಣ. ಶ್ರಮದಿಂದ ದುಡಿದು ಆದರ್ಶ ಬದುಕನ್ನು ಕಂಡುಕೊಳ್ಳಬೇಕೆಂಬ ಆಶಯವನ್ನು ಬಿತ್ತಿದವರು ಗಾಂಧೀಜಿ. ಅವರು ಹಾಕಿಕೊಟ್ಟ ಹಾದಿ ಗಟ್ಟಿಯಾದುದು. ಅದೇ ನಮ್ಮ ಬದುಕಿನ ಮಾರ್ಗ ಆಗಬೇಕು ಎಂದು ಕಿವಿಮಾತು ಹೇಳಿದರು.

ಗಾಂಧಿವಾದಿ ಎಲ್. ನರಸಿಂಹಯ್ಯ ಗಾಂಧಿ ವಿಚಾರಧಾರೆಗಳ ಪ್ರಸ್ತುತತೆ ಕುರಿತು ಮಾತನಾಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ. ಕೃಷ್ಣ ಮಾತನಾಡಿದರು. ಪ್ರೊ.ಎಂ.ಆರ್. ಶ್ರೀನಿವಾಸ್, ಕೇಂದ್ರ ಸಾಹಿತ್ಯ ಅಕಾಡೆಮಿಯ ಚಂದ್ರಶೇಖರ್, ಟ್ರಸ್ಟ್ ಅಧ್ಯಕ್ಷ ಸಿಸಿರಾ, ಕಾರ್ಯದರ್ಶಿ ಹೇಮಾವತಿ, ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸ್, ಪ್ರಾಂಶುಪಾಲ ಪ್ರೊ.ಆರ್. ಮಹಾಲಕ್ಷ್ಮಿ ಮತ್ತಿತರರು ಉಪಸ್ಥಿತರಿದ್ದರು.



ಬೆಂಗಳೂರಿನ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ಈಚೆಗೆ ಗಾಂಧಿ ಜಯಂತಿ ಅಂಗವಾಗಿ ಹಮ್ಮಿಕೊಂಡಿದ್ದ ವಿಚಾರ ಸಂಕಿರಣವನ್ನು ಗಾಂಧಿವಾದಿ ಎಲ್. ನರಸಿಂಹಯ್ಯ ಉದ್ಘಾಟಿಸಿದರು. ಪದಾಧಿಕಾರಿಗಳಾದ ಎ.ಆರ್. ಶ್ರೀನಿವಾಸಯ್ಯ, ಡಾ.ವೂಡೇ ಪಿ. ಕೃಷ್ಣ, ಡಾ.ಎಲ್. ಹನುಮಂತಯ್ಯ, ಪ್ರೊ. ಎಂ.ಆರ್. ಶ್ರೀನಿವಾಸ್ ಉಪಸ್ಥಿತರಿದ್ದರು.

ಈ ಸಂಜೆ
ಬುಧವಾರ, 19 ಅಕ್ಟೋಬರ್ 2011

# ಅವಿರೋಧ ಆಯ್ಕೆ

ಬೆಂಗಳೂರು, ಅ.19- ಕುಂಚಿಟಿಗರ ಸಾರ್ವಜನಿಕ ವಿದ್ಯಾರ್ಥಿ ನಿಲಯದ 2011-14ನೆ ಸಾಲಿಗೆ ಪದಾಧಿಕಾರಿಗಳು ಹಾಗೂ ಆಡಳಿತ ಮಂಡಳಿ ಸದಸ್ಯರುಗಳನ್ನು ಅವಿರೋಧವಾಗಿ ಆಯ್ಕೆ ಮಾಡಲಾಗಿದೆ.

ಅಧ್ಯಕ್ಷರಾಗಿ ಟಿ.ವಿ.ಮಾರುತಿ, ಉಪಾಧ್ಯಕ್ಷರಾಗಿ ಕೆ.ಪಿ.ನರಸಿಂಹಮೂರ್ತಿ, ಕಾರ್ಯದರ್ಶಿ ಕೆ.ಸಿ.ಎಸ್.ಚಂದ್ರಶೇಖರ್, ಜಂಟಿ ಕಾರ್ಯದರ್ಶಿ ಮಾಸ್ತಿ ಸೋಮಶೇಖರ್, ಖಜಾಂಚಿ ಬಿ.ಎಂ.ಪಾರ್ಥಸಾರಥಿ ಹಾಗೂ ಆಂತರಿಕ ಲೆಕ್ಕ ಪರಿಶೋಧಕರಾಗಿ ಕೆ.ಕೃಷ್ಣಸ್ವಾಮಿ ಆಯ್ಕೆಯಾಗಿದ್ದಾರೆ.

ಆಡಳಿತ ಮಂಡಳಿ ಸದಸ್ಯರುಗಳಾಗಿ ಎಚ್.ಎನ್.ಮುದ್ದುಕೃಷ್ಣ, ಟಿ.ವಿ.ಶ್ರೀರಾಮ್, ಡಬ್ಲ್ಯು.ಪಿ.ಶಿವಕುಮಾರ್, ಪ್ರೊಡೆ ಪಿ.ಕೃಷ್ಣ, ಡಬ್ಲ್ಯು.ಪಿ. ಸುರೇಶ್‌ಕುಮಾರ್, ಬಿ.ಎಂ.ರಾಜ್‌ಗೋಪಾಲ್, ಬಿ.ಸಿ.ಶಿವರಾಜ್, ಆರ್.ವಿ.ವಿಜಯಭಾಸ್ಕರ್, ಡಬ್ಲ್ಯು.ಜಿ. ರಾಮಕೃಷ್ಣ, ಮಾಸ್ತಿ ವಿವೇಕ್, ಎಂ.ಎಂ.ಟಿ.ರವಿಮುಂಡಾಲಪ್ಪ, ಎಂ.ಎಂ.ಟಿ. ಮುನಿಸ್ವಾಮಪ್ಪ, ತಾರಾ ರಾಮಚಂದ್ರ, ಬಿ.ಆರ್.ವಿಶ್ವನಾಥ್, ಎಸ್.ಮಂಜುನಾಥ್, ಪಿ.ಸಿ.ನಾರಾಯಣ್, ಸಿ.ಪುರುಷೋತ್ತಮ್, ಕೆ.ಸಿ.ಎಸ್.ಮೋಹನ್, ಎಸ್.ಎಂ.ಮಧುಸೂದನಗೌಡ ಆಯ್ಕೆಯಾಗಿದ್ದಾರೆ.

ಸಂಜೆವಾಣಿ
ಮಂಗಳವಾರ 18 ಅಕ್ಟೋಬರ್ 2011

# ವಿದ್ಯಾರ್ಥಿನಿಲಯ ಆಡಳಿತ ಮಂಡಳಿಗೆ ಅವಿರೋಧ ಆಯ್ಕೆ

ಬೆಂಗಳೂರು, ಅ. ೧೮- 2011-14ನೇ ಸಾಲಿನ ಕುಂಚಿಗರ ಸಾರ್ವಜನಿಕ ವಿದ್ಯಾರ್ಥಿ ನಿಲಯದ ಆಡಳಿತ ಮಂಡಳಿಗೆ ಕೆಳಕಂಡ ಪದಾಧಿಕಾರಿಗಳನ್ನು ಹಾಗೂ ಸದಸ್ಯರುಗಳನ್ನು ಅವಿರೋಧವಾಗಿ ಆಯ್ಕೆ ಮಾಡಲಾಗಿದೆ.

ಅಧ್ಯಕ್ಷರಾಗಿ ಟಿ.ವಿ. ಮಾರುತಿ, ಉಪಾಧ್ಯಕ್ಷರಾಗಿ ಕೆ.ಪಿ. ನರಸಿಂಹಮೂರ್ತಿ, ಕಾರ್ಯದರ್ಶಿಯಾಗಿ ಕೆ.ಸಿ.ಎನ್. ಚಂದ್ರಶೇಖರ್, ಜಂಟಿ ಕಾರ್ಯದರ್ಶಿಯಾಗಿ ಮಾಸ್ತಿ ಸೋಮಶೇಖರ್, ಖಜಾಂಚಿಯಾಗಿ ಬಿ.ಎಂ. ಪಾರ್ಥಸಾರಥಿ ಮತ್ತು ಆಂತರಿಕ ಲೆಕ್ಕ ಪರಿಶೋಧಕರಾಗಿ ಕೆ. ಕೃಷ್ಣಸ್ವಾಮಿ ಆಯ್ಕೆಯಾಗಿದ್ದು, ಸದಸ್ಯರುಗಳಾಗಿ ಎಚ್.ಎನ್. ಮುದ್ದುಕೃಷ್ಣ, ಡಬ್ಲ್ಯೂ. ಪಿ. ಶಶಿಕುಮಾರ್, ಡಬ್ಲ್ಯೂ.ಪಿ. ಸುರೇಶ್ ಕುಮಾರ್, ಬಿ.ಸಿ. ಶಿವರಾಜ್, ಡಬ್ಲ್ಯೂ.ಜಿ. ರಾಮಕೃಷ್ಣ, ಎಂ.ಎಂ.ಟಿ. ರವಿಮಂಡಾಲಪ್ಪ, ತಾರಾ ರಾಮಚಂದ್ರ, ಎಸ್. ಮಂಜುನಾಥ, ಸಿ. ಪುರುಷೋತ್ತಮ್, ಎನ್.ಎಂ. ಮಧುಸೂದನಗೌಡ, ಟಿ.ವಿ. ಶ್ರೀರಾಮ್, ವೂಡೇ ಪಿ. ಕೃಷ್ಣ, ಬಿ.ಎಂ. ರಾಜ್‌ಗೋಪಾಲ್, ಆರ್.ವಿ. ವಿಜಯ್ ಭಾಸ್ಕರ್, ಮಾಸ್ತಿ ವಿವೇಕ್, ಎಂ.ಎಂ.ಟಿ ಮುನಿಸ್ವಾಮಪ್ಪ, ಬಿ.ಆರ್. ವಿಶ್ವನಾಥ್, ಹನುಬೋರಣ್ಣ, ಪಿ.ಸಿ. ನಾರಾಯಣ, ಕೆ.ಸಿ.ಎನ್. ಮೋಹನ್ ನೇಮಕಗೊಂಡಿದ್ದಾರೆ.

ಸಂಯುಕ್ತ ಕರ್ನಾಟಕ
ಬೆಂಗಳೂರು 25-12-2011

# ನಕ್ಸಲ್ ಚಟುವಟಿಕೆ ಹೆಚ್ಚಾಗಲು ಸರ್ಕಾರವೇ ಕಾರಣ



ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಪೂಡೇ ಪ್ರತಿಷ್ಠಾನ ಸಂಯುಕ್ತಾಶ್ರಯದಲ್ಲಿ ಬೆಂಗಳೂರಿನಲ್ಲಿ ಶನಿವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ವಿಧಾನಪರಿಷತ್ ಸದಸ್ಯ ಎಂ.ವಿ. ರಾಜಶೇಖರನ್ ಅವರಿಗೆ 'ಪೂಡೇ ಪ್ರತಿಷ್ಠಾನ ಪ್ರಶಸ್ತಿ'ಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ ಪ್ರದಾನ ಮಾಡಿದ ಸಂದರ್ಭದಲ್ಲಿ ವಿಶ್ರಾಂತ ಕುಲಪತಿ ಪ್ರೊ.ಎಸ್. ಬಿಸಲಯ್ಯ ಪೂಡೇ ಪ್ರತಿಷ್ಠಾನ ಅಧ್ಯಕ್ಷ ಪೂಡೇ ಪಿ.ಕೃಷ್ಣ, ಸಹ ಕಾರ್ಯದರ್ಶಿ ಡಿ.ಕೆ. ಕೋದಂಡರಾಮ ಉಪಸ್ಥಿತರಿದ್ದರು.

ಬೆಂಗಳೂರು, ಡಿ. 24: ಉದ್ಯೋಗ ಅವಕಾಶಗಳನ್ನು ಹೆಚ್ಚಿಸುವತ್ತ ಸರ್ಕಾರಗಳು ಗಮನ ಹರಿಸದೆ ಇರುವುದೇ ನಕ್ಸಲ್‌ನಂತಹ ಸಮಸ್ಯೆಗಳು ಉಲ್ಬಣಗೊಳ್ಳಲು ಮುಖ್ಯ ಕಾರಣ ಎಂದು ವಿಧಾನಪರಿಷತ್ ಸದಸ್ಯ ಎಂ.ವಿ. ರಾಜಶೇಖರನ್ ಅಭಿಪ್ರಾಯಪಟ್ಟಿದ್ದಾರೆ.

ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಪೂಡೇ ಪ್ರತಿಷ್ಠಾನ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿದ್ದ ಗಾಂಧೀವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಪೂಡೇ ಪ್ರತಿಷ್ಠಾನ ಪ್ರಶಸ್ತಿ ಸ್ವೀಕರಿಸಿ ಅವರು ಮಾತನಾಡಿದರು.

ಆಂಧ್ರಪ್ರದೇಶ, ಜಾರ್ಖಂಡ್, ಕರ್ನಾಟಕ ಸೇರಿದಂತೆ ಹಲವು ರಾಜ್ಯಗಳಲ್ಲಿ ನಕ್ಸಲ್ ಚಟುವಟಿಕೆಗಳು ನಡೆಯುತ್ತಿವೆ. ನಿರುದ್ಯೋಗಿ ಯುವ ಜನಾಂಗಕ್ಕೆ ಸರ್ಕಾರ ಉದ್ಯೋಗ ಅವಕಾಶ, ವಿವಿಧ ಸವಲತ್ತುಗಳನ್ನು ಒದಗಿಸುವತ್ತ ಗಮನ ಹರಿಸದೆ ಇರುವುದು ಹಾಗೂ ಸರ್ಕಾರದ ಆರ್ಥಿಕ ನೀತಿಗಳು ಇದಕ್ಕೆ ಮುಖ್ಯ ಕಾರಣ ಎಂದು ಕಳವಳ ವ್ಯಕ್ತಪಡಿಸಿದರು.

ಗ್ರಾಮೀಣ ಜನರ ಜೀವನ ಸುಧಾರಣೆ ಆಗಬೇಕು. ಸಮಾಜದ ಕಟ್ಟಕಡೆಯ ವ್ಯಕ್ತಿಯನ್ನು ಗಮನದಲ್ಲಿಟ್ಟುಕೊಂಡು ಯೋಜನೆಗಳನ್ನು ರೂಪಿಸಬೇಕು. ಗ್ರಾಮೀಣ ಜನರ ಬದುಕು ಹಸನಾಗಬೇಕು ಎಂಬ ಮಹಾತ್ಮಾ ಗಾಂಧೀಜಿ ಅವರ ಕಂಡ ಕನಸು ಇಂದಿಗೂ ನನಸಾಗಿಲ್ಲ. ಗಾಂಧೀಜಿ ಅವರ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡಿಲ್ಲ. ಹಾಗಾಗಿಯೇ ಹಲವಾರು ಸಮಸ್ಯೆಗಳನ್ನು ಇಂದು ಎದುರಿಸುತ್ತಿದ್ದೇವೆ ಎಂದು ವಿಷಾದಿಸಿದರು.

ಸ್ವಾತಂತ್ರ್ಯ ಪೂರ್ವ ಗ್ರಾಮೀಣ ಪ್ರದೇಶದಲ್ಲಿದ್ದ ಸಮಸ್ಯೆಗಳು ಇಂದಿಗೂ ಜೀವಂತವಾಗಿವೆ. ಇದಕ್ಕೆ ಜಾಗತೀಕರಣ, ಉದಾರೀಕರಣದ ಪ್ರಭಾವವೇ ಮುಖ್ಯ ಕಾರಣ. ಸರ್ಕಾರ ಸಹ ಈ ಪ್ರಭಾವಕ್ಕೆ ಒಳಗಾಗಿ ಗ್ರಾಮೀಣ ಪ್ರದೇಶಗಳತ್ತ ಗಮನ ಹರಿಸದಿರುವುದು ದುರಾದೃಷ್ಟದ ಸಂಗತಿ ಎಂದು ಬೇಸರ ವ್ಯಕ್ತಪಡಿಸಿದರು.

**▶▶ ದೇಣಿಗೆ**

ಕಾರ್ಯಕ್ರಮದಲ್ಲಿ ತಮಗೆ ನೀಡಿದ 25ಸಾವಿರ ರೂಗಳ ಪ್ರಶಸ್ತಿಯ ಮೊತ್ತದ ಜೊತೆಗೆ ವಿಧಾನಪರಿಷತ್ ಸದಸ್ಯನಾಗಿರುವುದರಿಂದ ನೀಡುವ ವೇತನದಲ್ಲಿ 25ಸಾವಿರ ರೂ.ಗಳನ್ನು ಪ್ರತಿಷ್ಠಾನಕ್ಕೆ ನೀಡುವುದಾಗಿ ರಾಜಶೇಖರನ್ ಘೋಷಿಸಿದರು.

**▶▶ ಅಧ್ಯಯನಕ್ಕೆ ಸಮಿತಿ**

ಉಪನ್ಯಾಸ ನೀಡಿದ ಕೃಷಿ ವಿಶ್ವವಿದ್ಯಾಲಯ ವಿಶ್ರಾಂತ ಕುಲಪತಿ ಪ್ರೊ. ಎಸ್. ಬಿಸಲಯ್ಯ ಜಾಗತೀಕರಣದಿಂದ ಹೆಚ್ಚು ಅನುಕೂಲವಾಗಿದೆಯೋ ಅಥವಾ ಅನಾನುಕೂಲವಾಗಿದೆಯೋ ಎಂಬುದರ ಕುರಿತು ತುಲನಾತ್ಮಕ ಅಧ್ಯಯನ ನಡೆಯಬೇಕಿದೆ ಎಂದು ಹೇಳಿದರು.

ನಗರ, ಪಟ್ಟಣಗಳಿಗಿಂತ ಗ್ರಾಮಗಳ ಮೇಲೆ ಜಾಗತೀಕರಣದ ಪ್ರಭಾವ ಹೆಚ್ಚು ಬೀರಿದೆ. ಜಾಗತೀಕರಣ, ಉದಾರೀಕರಣದಿಂದ ಪ್ರಾದೇಶಿಕ ಅಸಮಾನತೆ ಹೆಚ್ಚಾಗಿದೆ. ಹೈದರಾಬಾದ್-ಕರ್ನಾಟಕ ಭಾಗವನ್ನು ನಂಜುಂಡಪ್ಪ ವರದಿಯನ್ನು ಆಧರಿಸಿ ಅಭಿವೃದ್ಧಿಗೊಳಿಸಲು ಸರ್ಕಾರ ಈಗ ಚಿಂತನೆ ನಡೆಸಿದೆ. ಆದರೆ, ಆ ಭಾಗದಲ್ಲಿ ಹಿಂದಿನ ಪರಿಸ್ಥಿತಿಗೂ ಈಗಿನ ಪರಿಸ್ಥಿತಿ ಬಹಳಷ್ಟು ವ್ಯತ್ಯಾಸಗಳಿವೆ.

ಹಾಗಾಗಿ ಮತ್ತೊಂದು ಸಮಿತಿಯನ್ನು ರಚಿಸುವತ್ತ ಸರ್ಕಾರ ಗಮನ ಹರಿಸಬೇಕು ಎಂದು ಪ್ರತಿಪಾದಿಸಿದರು.

ಕಾರ್ಯಕ್ರಮದಲ್ಲಿ ಪೂಡೇ ಪ್ರತಿಷ್ಠಾನ ಅಧ್ಯಕ್ಷ ಪೂಡೇ ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ, ಸಹ ಕಾರ್ಯದರ್ಶಿ ಡಿ.ಕೆ. ಕೋದಂಡರಾಮ ಮತ್ತಿತರರು ಭಾಗವಹಿಸಿದ್ದರು.

C ವಿಜಯ ಕರ್ನಾಟಕ
ಶುಕ್ರವಾರ 23 ಡಿಸೆಂಬರ್ 2011, ಬೆಂಗಳೂರು

# ಚಾರಿತ್ರ್ಯ ಶಿಕ್ಷಣದ ಕೊರತೆ: ಕಳವಳ

• ವಿಕ ಸುದ್ದಿಲೋಕ ಕೆಂಗೇರಿ ಉಪನಗರ

ಚಾರಿತ್ರ್ಯ ಶಿಕ್ಷಣದ ಕೊರತೆಯಿಂದಾಗಿ ಸಮಾಜದಲ್ಲಿ ಭ್ರಷ್ಟಾಚಾರ ವ್ಯಾಪಿಸಿದ್ದು ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಹೇಳಿದರು.

ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್, ಬೆಂಗಳೂರು ವಿವಿಯ ಗಾಂಧಿ ಭವನ ಹಾಗೂ ಗಾಂಧಿ ಪೀಸ್ ಫೌಂಡೇಷನ್ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಂಡಿದ್ದ 'ಗಾಂಧಿತ್ವ' ಆಶುಭಾಷಣ ಸ್ಪರ್ಧೆ ಉದ್ಘಾಟಿಸಿ ಮಾತನಾಡಿದರು.

ಜಾಗತೀಕರಣದ ಪ್ರಭಾವದಿಂದ ಇಂದು ನಾವು ಆರ್ಥಿಕ ಗುಲಾಮರಾಗಿದ್ದೇವೆ. ಭ್ರಷ್ಟರಾಗಿ ರಾಜಕಾರಣಿಗಳು ಜೈಲು ಪಾಲಾಗುತ್ತಿರುವುದು ಮುಂದಿನ ಪೀಳಿಗೆಗೆ ಒಳ್ಳೆಯ ಸಂದೇಶ ರವಾನೆಯಾಗುತ್ತಿಲ್ಲ. ಸ್ವಾತಂತ್ರ್ಯ ಹೋರಾಟಕ್ಕಾಗಿ ತ್ಯಾಗಬಲಿದಾನ ಮಾಡಿದವರನ್ನು ಸ್ಮರಿಸುವ ಮೂಲಕ ಅವರ ಆದರ್ಶಗಳನ್ನ ಮೈಗೂಡಿಸಿಕೊಳ್ಳುವಂತೆ ಸಲಹೆ ನೀಡಿದರು.



ಕೆಂಗೇರಿ ಉಪನಗರದಲ್ಲಿ ಅಂತರ್ ಕಾಲೇಜು 'ಗಾಂಧಿತ್ವ' ಆಶುಭಾಷಣ ಸ್ಪರ್ಧೆಯನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಉದ್ಘಾಟಿಸಿದರು.

ಈ ಸಂದರ್ಭದಲ್ಲಿ ನಾನಾ ಕಾಲೇಜಿನ ವಿದ್ಯಾರ್ಥಿಗಳು ಗಾಂಧೀಜಿ ಬಗ್ಗೆ ಆಶುಭಾಷಣ ಸ್ಪರ್ಧೆಯಲ್ಲಿ ವಿಚಾರ ಮಂಡಿಸಿದರು.

ಗಾಂಧಿ ಪೀಸ್ ಫೌಂಡೇಷನ್‌ನ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ ಬೆಂಗಳೂರು ವಿವಿಯ ರಾಜಕೀಯ ಶಾಸ್ತ್ರ ವಿಭಾಗದ ಮುಖ್ಯಸ್ಥ ಡಾ. ಜೀವನ್‌ಕುಮಾರ್ ಉಪಸ್ಥಿತರಿದ್ದರು.

ಪ್ರಜಾವಾಣಿ
ಮಂಗಳವಾರ 18ನೇ ಅಕ್ಟೋಬರ್ 2011

# ಪದಾಧಿಕಾರಿಗಳ ಆಯ್ಕೆ

ಕುಂಚಿಟಿಗರ ಸಾರ್ವಜನಿಕ ವಿದ್ಯಾರ್ಥಿ ನಿಲಯದ ಪದಾಧಿಕಾರಿಗಳಾಗಿ ಕೆಳಕಂಡವರು ಆಯ್ಕೆಯಾಗಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಟಿ.ವಿ.ಮಾರುತಿ (ಅಧ್ಯಕ್ಷ), ಕೆ.ಪಿ.ನರಸಿಂಹಮೂರ್ತಿ (ಉಪಾಧ್ಯಕ್ಷ), ಕೆ.ಸಿ.ಎನ್.ಚಂದ್ರಶೇಖರ್ (ಕಾರ್ಯದರ್ಶಿ), ಮಾಸ್ತಿ ಸೋಮಶೇಖರ್ (ಜಂಟಿ ಕಾರ್ಯದರ್ಶಿ), ಬಿ.ಎಂ.ಪಾರ್ಥಸಾರಥಿ (ಖಜಾಂಚಿ), ಕೆ. ಕೃಷ್ಣಸ್ವಾಮಿ (ಆಂತರಿಕ ಲೆಕ್ಕಪರಿಶೋಧಕ), ಆಡಳಿತ ಮಂಡಳಿಯ ಸದಸ್ಯರಾಗಿ ಎಚ್.ಎನ್.ಮುದ್ದುಕೃಷ್ಣ, ಟಿ.ವಿ. ಶ್ರೀರಾಮ್, ಪೂಡೇ ಪಿ.ಕೃಷ್ಣ, ಬಿ.ಎಂ. ರಾಜ್‌ಗೋಪಾಲ್, ಆರ್.ವಿ.ವಿಜಯ್ ಭಾಸ್ಕರ್, ಪಿ.ಸಿ.ನಾರಾಯಣ, ಡಬ್ಲ್ಯು. ಪಿ.ಶಿವಕುಮಾರ್, ಡಬ್ಲ್ಯು.ಜಿ.ರಾಮಕೃಷ್ಣ, ಎಂ.ಎಂ.ಟಿ.ರವಿಮಂದಾಲಪ್ಪ, ತಾತಾ ರಾಮಚಂದ್ರ, ಬಿ.ಆರ್.ವಿಶ್ವನಾಥ್, ಎಸ್.ಮಂಜುನಾಥ್, ಎನ್.ಎಂ. ಮಧುಸೂದನಗೌಡ ಆಯ್ಕೆಯಾಗಿದ್ದಾರೆ.

ಸಂಜೆವಾಣಿ ಭಾನುವಾರ 16 ಅಕ್ಟೋಬರ್ 2011

# ಒಂದಾದರೂ ಸಸಿ ನೆಡಿ ಅದು ಪುಣ್ಯದ ಕೆಲಸ



ಮಾಗಡಿಯ ವೀರೇಗೌಡನ ದೊಡ್ಡಿಯಲ್ಲಿ ಶೇಷಾದ್ರಿಪುರಂ ಪ್ರೌಢ ಶಾಲೆ ಮತ್ತು ಭಾರತ ಸೇವಾದಳ ಸರ್ವೋದಯ ಶಾಖೆಯ ವತಿಯಿಂದ ನಡೆದ ಕಾರ್ಯಕ್ರಮದಲ್ಲಿ ವಲಯ ಅರಣ್ಯಾಧಿಕಾರಿ ಶಾಂತಕುಮಾರ ಸ್ವಾಮಿ ಸಸಿನೆಟ್ಟರು. ಡಾ. ವೂಡೋ ಪಿ. ಕೃಷ್ಣ ಇದ್ದರು.

ಮಾಗಡಿ.ಅ.16: ಪ್ರತಿಯೊಬ್ಬರು ಜೀವಿತದ ಅವಧಿಯಲ್ಲಿ ಕನಿಷ್ಠ ಒಂದಾದರು ಸಸಿ ನೆಡುವುದು ಪುಣ್ಯದ ಕೆಲಸ ಎಂದು ಭಾವಿಸಿ, ಹತ್ತಾರು ಸಸಿ ನೆಟ್ಟು ನೀರೆರೆದು ಪೋಷಿಸುವಂತೆ ಶೇಷಾದ್ರಿ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ.ಪಿ.ಕೃಷ್ಣ ಕರೆ ನೀಡಿದರು.

ಅವರು ತಾಲ್ಲೂಕಿನ ಹಂಚಿಕುಪ್ಪೆ ಗ್ರಾ.ಪಂ.ವ್ಯಾಪ್ತಿಯ ವೀರೇಗೌಡನ ದೊಡ್ಡಿಯ ಮಹಲಿಂಗೇಶ್ವರ ಪ್ರೌಢಶಾಲೆಯ ಆವರಣದಲ್ಲಿ ಶೇಷಾದ್ರಿಪುರಂ ಪ್ರೌಢಶಾಲೆ ಮತ್ತು ಭಾರತ ಸೇವಾದಲ ಸರ್ವೋದಯ ಶಾಖೆಯ ವತಿಯಿಂದ ನಡೆದ ಸಸಿ ನೆಡುವ ಮತ್ತು ಬೀಜ ಬಿತ್ತುವ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದರು.

ಪೋಷಕರು ಮತ್ತು ಶಿಕ್ಷಕರು ಮಕ್ಕಳಿಗೆ ಬಾಲ್ಯದಿಂದಲೆ ಪರಿಸರ ಸಂರಕ್ಷಣೆಯ ಬಗ್ಗೆ ಮನವರಿಕೆ ಮಾಡಿಕೊಡಬೇಕಿದೆ. ಅರಣ್ಯ ನಾಶದಿಂದ ಮಾನವನ ಬದುಕಿನ ಮೇಲಾಗುತ್ತಿರುವ ಕೆಟ್ಟ ಪರಿಣಾಮಗಳ ಬಗ್ಗೆ ಜನತೆಯಲ್ಲಿ ತಿಳುವಳಿಕೆ ಮೂಡಿಸದಿದ್ದರೆ ಮುಂದೆ ಬದುಕು ದುರಂತವಾಗಲಿದೆ. ಮರ ಬೆಳೆಸುವುದು ನಮ್ಮ ಮೂಲಭೂತ ಹಕ್ಕಾಗಬೇಕಿದೆ. ಗ್ರಾಮೀಣ ಪರಿಸರದ ನಡುವೇ ಇರುವ ಗಿಡಮರಗಳನ್ನು ಪರಿಚಯಿಸುವುದು ಮತ್ತು ಒಂದು ದಿನದ ಪರಿಸರ ಅಧ್ಯಯನದ ದೃಷ್ಟಿಯಿಂದ ಸಾವನದುರ್ಗದ ಅರಣ್ಯಪ್ರದೇಶದಲ್ಲಿ ಸಸಿ ನೆಡಲಾಗುತ್ತಿದೆ. ಮರಗಿಡಗಳನ್ನು ಕತ್ತರಿಸುವುದರ ವಿರುದ್ಧ ಸಂಘಟಿತ ಹೋರಾಟ ತೀರಾ ಅಗತ್ಯವಾಗಿದೆ ಎಂದು ಡಾ.ವೂಡೇ.ಪಿ.ಕೃಷ್ಣ ತಿಳಿಸಿದರಲ್ಲದೆ, ಭಾರತ ಸೇವಾದಳದ ಮಹತ್ವವನ್ನು ವಿವರಿಸಿದರು.

ನಾವೀಗ ನೆಟ್ಟ ಸಸಿ ನಮಗೆ ನೆರಳು ನೀಡಿ ರಕ್ಷಿಸಲಿದೆ ಎಂಬ ಆಶಾಭಾವನೆ ಮಕ್ಕಳಲ್ಲಿ ಒಡಮೂಡಿದಾಗ ಪರಿಸರದ ಮೇಲೆ ಮಮಕಾರ ಹೆಚ್ಚಲಿದೆ. ಉತ್ತಮ ಪರಿಸರವನ್ನು ಉಳಿಸಿ ಬೆಳಸದಿದ್ದರೆ ಉರಿಬಿಸಿಲಿನ ಬೇಗೆ ಹೆಚ್ಚಲಿದೆ ಎಂದು ಭಾರತ ಸೇವಾದಳ ಕೇಂದ್ರ ಸಮಿತಿಯ ಕಾರ್ಯದರ್ಶಿ ಬಿ.ಸಿ.ವೆಂಕಟೇಶ್ ತಿಳಿಸಿದರು. ತಾಲ್ಲೂಕು ಸೇವಾದಳದ ಅಧ್ಯಕ್ಷ ಎಚ್.ಶಿವಕುಮಾರ್, ಮಹಿಳಾ ವಿಭಾಗದ ಕಾರ್ಯದರ್ಶಿ ಕಲ್ಪನಾಶಿವಣ್ಣ, ವಲಯ ಅರಣ್ಯಾಧಿಕಾರಿ ಶಾಂತಕುಮಾರಸ್ವಾಮಿ ಮಾತನಾಡಿದರು.

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಸಂಚಾಲಕ ದೊಡ್ಡಬಾಣಗೆರೆ ಮಾರಣ್ಣ ಮಾತನಾಡಿ ಸಾವನದುರ್ಗದ ಚಾರಿತ್ರಿಕ ಮಾಹಿತಿ ಮತ್ತು ಅರಣ್ಯದಲ್ಲಿ ಕ್ರಿ.ಶ.1881ರಲ್ಲಿ ಪ್ರವಾಸಿ ಸಂಶೋಧಕ ಕರ್ನಲ್ ಬ್ರಾನ್‌ಫಿಲ್ ಪತ್ತೆ ಮಾಡಿದ್ದ ಪ್ರಾಗೈತಿಹಾಸಿಕ ನೆಲೆಗಳು ಹಾಗೂ ಪ್ರಾಣಿ ಪಕ್ಷಿಗಳ ವಿವರಗಳನ್ನು ವಿವರಿಸಿದರು.

ಹಂಚಿಕುಪ್ಪೆ ಗ್ರಾ.ಪಂ. ಅಧ್ಯಕ್ಷೆ ಶಹನಾಜ್ ಬಾನು ಅಧ್ಯಕ್ಷತೆವಹಿಸಿದ್ದರು. ಪಂಚಾಯತಿ ಅಭಿವೃದ್ಧಿ ಅಧಿಕಾರಿ ಶಿವರಾಜಯ್ಯ ಹಾಗೂ ಶೇಷಾದ್ರಿ ಪುರಂ ಪ್ರೌಢಶಾಲೆಯ ಶಿಕ್ಷಕರು ಮತ್ತು ಮಕ್ಕಳು ಭಾಗವಹಿಸಿದ್ದರು.

ಪ್ರಜಾವಾಣಿ

ಮಂಗಳವಾರ
11ನೇ ಅಕ್ಟೋಬರ್ 2011

# ವ್ಯಕ್ತಿಯಲ್ಲಿ ಸತ್ಯದ ಶಕ್ತಿ ಅರಳಬೇಕು: ಸ್ವಾಮೀಜಿ

ಪ್ರಜಾವಾಣಿ ವಾರ್ತೆ

ನಾಗಮಂಗಲ: ಒಬ್ಬ ವ್ಯಕ್ತಿಯ ಸುತ್ತಲಿನ ಪರಿಸರ ಉತ್ತಮವಾಗಿರಬೇಕಾದರೆ ಆ ವ್ಯಕ್ತಿಯಲ್ಲಿ ಸತ್ಯದ ಶಕ್ತಿ ಅರಳಬೇಕು. ಅಂತಹ ವ್ಯಕ್ತಿಗಳಲ್ಲಿ ಮಹಾತ್ಮ ಗಾಂಧೀಜಿ ಮೊದಲಿಗರು ಎಂದು ಆದಿಚುಂಚನಗಿರಿ ಮಠದ ಕಾರ್ಯದರ್ಶಿ ನಿರ್ಮಲಾನಂದನಾಥ ಸ್ವಾಮೀಜಿ ಅಭಿಪ್ರಾಯಪಟ್ಟರು.

ಸೋಮವಾರ ಪಟ್ಟಣದ ಆದಿಚುಂಚನಗಿರಿ ಕಲಾ ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನ ಸಭಾಂಗಣದಲ್ಲಿ ಕಾಲೇಜಿನ ಸಾಂಸ್ಕೃತಿಕ ಸಮಿತಿ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ಮತ್ತು ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧಿ ಭವನ ಬೆಂಗಳೂರು ಇವರ ಸಂಯುಕ್ತಾಶ್ರಯದಲ್ಲಿ ನಡೆದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-11 ವಿಶೇಷ ಉಪನ್ಯಾಸ ಮಾಲೆ ಕಾರ್ಯಕ್ರಮದ ಸಾನಿಧ್ಯ ವಹಿಸಿ ಅವರು ಮಾತನಾಡಿದರು.

ಗಾಂಧೀಜಿಯವರಲ್ಲಿದ್ದ ಸತ್ಯ ಎಂಬ ಅಂತಃಶಕ್ತಿ ಅವರನ್ನು ಮಹಾತ್ಮರನ್ನಾಗಿಸಿದೆ. ಸತ್ಯದ ದಾರಿಯಲ್ಲಿ ಇಂದು ನಡೆದರೆ ಸಾಲದು, ನಾವೇ ಸತ್ಯವಾಗಬೇಕಾದ ಕಾಲ ಸನ್ನಿಹಿತವಾಗಿದೆ. ಗಾಂಧೀಜಿ ಹಾಗೂ ಅವರ ಮೌಲ್ಯ ಆದರ್ಶಗಳು ಇಂದಿಗೂ ಪ್ರಸ್ತುತ ಎಂದರು.

ವಿಧಾನಸಭೆ ಮಾಜಿ ಸಭಾಪತಿ ಕೃಷ್ಣ ಮಾತನಾಡಿ, ವಿಶ್ವದಾದ್ಯಂತ ಮಹಾತ್ಮನಿಗೆ ಸಿಗುತ್ತಿರುವ ಗೌರವ, ಅವರ ವಿಚಾರಗಳಿಗೆ ದೊರೆಯುತ್ತಿರುವ ಮನ್ನಣೆ ಗಾಂಧಿ ಜನಿಸಿದ ನಮ್ಮ ದೇಶದಲ್ಲಿ ಸಿಗುತ್ತಿಲ್ಲ ಎಂದು ವಿಷಾದ ವ್ಯಕ್ತಪಡಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ಡಾ.ವೂಡೆ.ಪಿ.ಕೃಷ್ಣ ಮಾತನಾಡಿ, ವಿದ್ಯಾರ್ಥಿಗಳ ಜೀವನ ಮುಗಿದಿದೆ. ಅವರ ಸಂಪ್ರದಾಯ ಮುಂದುವರಿದಿದ್ದೇ ಆದರೆ ಸಾಕಾರವಾಗಬೇಕಾದರೆ ಗಾಂಧೀಜಿಯವರ ಜೀವನ ಅಧ್ಯಯನ, ಸಬಕೋ ಸನ್ಮತಿ ದೇ ಭಗವಾನ್ ಎಂಬ ನುಡಿಗೆ ನಿಜವಾದ ಅಗತ್ಯ. ಗಾಂಧೀಜಿಯವರ ಪ್ರಾರ್ಥನಾ ಸಂಪ್ರದಾಯ ಅರ್ಥ ಸಿಗುತ್ತಿತ್ತು ಎಂದರು.



ನಾಗಮಂಗಲದ ಆದಿಚುಂಚನಗಿರಿ ಕಲಾ ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನಲ್ಲಿ ಸೋಮವಾರ ನಡೆದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-11 ವಿಶೇಷ ಉಪನ್ಯಾಸ ಮಾಲೆ ಕಾರ್ಯಕ್ರಮವನ್ನು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಉದ್ಘಾಟಿಸಿದರು. ನಿರ್ಮಲಾನಂದನಾಥ ಸ್ವಾಮೀಜಿ, ಚೈತನ್ಯಾನಂದನಾಥ ಸ್ವಾಮೀಜಿ, ಮಾಜಿ ಸಭಾಪತಿ ಕೃಷ್ಣ ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಮಾತನಾಡಿ, ವಿದ್ಯಾಭ್ಯಾಸ ಇಂದು ಕೇವಲ ಅಕ್ಷರಭ್ಯಾಸಕ್ಕೆ ಸೀಮಿತವಾಗಿದೆ. ಜ್ಞಾನ ಎನ್ನುವುದು ಬದುಕಲು ಕಲಿಸುವುದು. ಅಂತಹ ಬದುಕು ಕಲಿಯಬೇಕಾದರೆ ಗಾಂಧೀಜಿಯವರ ಆದರ್ಶ ಮೌಲ್ಯಗಳ ಪರಿಚಯವಿರಬೇಕು ಎಂದು ನುಡಿದರು.

ಇದೇ ಸಂದರ್ಭದಲ್ಲಿ ಕಾಲೇಜಿನ ಪ್ರಾಂಶುಪಾಲ ಕೆ.ಎಂ.ಸ್ವಾಮಿಗೌಡ ಮಾತನಾಡಿ, ನವೆಂಬರ್ 1ರ ನಂತರ ಪ್ರತಿ ಸೋಮವಾರ ಅಧ್ಯಾಪಕರಾದಿಯಾಗಿ ವಿದ್ಯಾರ್ಥಿಗಳು ಖಾದಿ ಬಟ್ಟೆ ಧರಿಸಿ ಕಾಲೇಜಿಗೆ ಬರಬೇಕೆಂದು ಘೋಷಿಸಿದರು. ಗಾಂಧೀಜಿಯವರ ಎಲ್ಲ ವಿಚಾರ ಹಾಗೂ ಆದರ್ಶಗಳನ್ನು ಏಕ ಕಾಲಕ್ಕೆ ಅನುಷ್ಠಾನಕ್ಕೆ ತರುವುದು ಕಷ್ಟ ಸಾಧ್ಯ. ಆದುದ್ದರಿಂದ ಖಾದಿ ಬಟ್ಟೆ ತೊಡುವ ಮೂಲಕ ಅವರ ಆದರ್ಶಗಳ ಪಾಲನೆಗೆ ಮುಂದಾಗುವುದಾಗಿ ತಿಳಿಸಿದರು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ನಾಗಮಂಗಲ ತಾಲ್ಲೂಕು ಪಂಚಾಯಿತಿ ಉಪಾಧ್ಯಕ್ಷ ಹೊನ್ನಾವರ ಶಂಕರ್ ಕಾಲೇಜಿನ 800 ವಿದ್ಯಾರ್ಥಿಗಳಿಗೆ ಗಾಂಧೀಜಿಯವರ ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ ಎಂಬ ಪುಸ್ತಕವನ್ನು ನೀಡಿದರು.

ಅಂತಿಮ ಬಿ.ಕಾಂ ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಚಾಲನೆಗೊಂಡಿತು. ಕಾಲೇಜಿನ ಸಾಂಸ್ಕೃತಿಕ ಘಟಕದ ಕಾರ್ಯದರ್ಶಿ ಎನ್.ರಾಮು ಸ್ವಾಗತಿಸಿ ವಂದಿಸಿದರು. ರಾಷ್ಟ್ರೀಯ ಸೇವಾ ಯೋಜನಾಧಿಕಾರಿ ಡಿ.ಬಿ.ಮಂಜೇಗೌಡ ನಿರೂಪಿಸಿದರು. ನಿವೃತ್ತ ಪ್ರಾಧ್ಯಾಪಕ ಜಿ.ಬಿ.ಶಿವರಾಜು ಪ್ರಾಸ್ತಾವಿಕವಾಗಿ ಮಾತನಾಡಿದರು.

ರಾಜ್ಯಪ್ರಗತಿ 10-10-2011

# ಡಾ. ವೂಡೇ ಪಿ. ಕೃಷ್ಣ ಅವರಿಗೆ ಸನ್ಮಾನ



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಇತ್ತೀಚೆಗೆ ಕನ್ನಡ ಭವನದಲ್ಲಿ ನಡೆದ ರಾಜ್ಯಮಟ್ಟದ ದ್ವಿತೀಯ ಸಾಹಿತ್ಯ, ಸಂಸ್ಕೃತಿ ಸಮಾವೇಶ ಕಾರ್ಯಕ್ರಮದಲ್ಲಿ ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಅವರಿಗೆ ಪಾನ್ಯಂ ನಟರಾಜ್ ಹೆಸರಿನ ಶಿಕ್ಷಣ ಸೇವಾ ದತ್ತಿ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಚಿತ್ರದಲ್ಲಿ ಟ್ರಸ್ಟ್‌ನ ಅಧ್ಯಕ್ಷ ಸಿಸಿರಾ, ಸಂಸ್ಕೃತ ವಿ.ವಿ. ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಕವಿ ಡಾ. ಮೂಡ್ನಾಕೂಡು ಚಿನ್ನಸ್ವಾಮಿ, ಸಮಾವೇಶದ ಸರ್ವಾಧ್ಯಕ್ಷರಾಗಿದ್ದ ಪಾನ್ಯಂ ನಟರಾಜ್, ವಕೀಲರಾದ ಎಂ.ಕೆ. ಪುಟ್ಟರಾಜು ಮೊದಲಾದವರಿದ್ದಾರೆ.

ಈ ಸಂಜೆ
ಭಾನುವಾರ
09-10-2011

# ಸತ್ಯದಿಂದ ಪ್ರಪಂಚ ಗೆದ್ದ ಬಾಪೂ

## ಗಾಂಧಿ ಜೀವನ ಮೌಲ್ಯ ಪಾಲಿಸಲು ಹನುಮಂತಯ್ಯ ಸಲಹೆ

ಬೆಂಗಳೂರು, ಅ.9- ಸತ್ಯಾಗ್ರಹದ ಮೂಲಕ ಹೊಸಲೋಕವನ್ನು ಕಟ್ಟಿದವರು, ಹಾಗೂ ಸತ್ಯದ ಪರವಾಗಿ ಸದಾನಿಂತು ಅಧ್ಯಾತ್ಮಿಕ ಸಂತರಾಗಿ ಪ್ರಪಂಚ ಗೆದ್ದವರು ರಾಷ್ಟ್ರಪಿತ ಮಹಾತ್ಮಗಾಂಧೀಜಿ ಎಂದು ಖ್ಯಾತ ವಿಚಾರವಾದಿ ಡಾ. ಎಲ್. ಹನುಮಂತಯ್ಯ ಅಭಿಪ್ರಾಯಪಟ್ಟರು.

ಕೇಂದ್ರ ಸಾಹಿತ್ಯ ಅಕಾಡೆಮಿ ಬುದ್ಧ ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ (ರಿ) ಹಾಗೂ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜುಗಳ ಸಂಯುಕ್ತಾಶ್ರಯದಲ್ಲಿ ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ವಿಚಾರ ಸಂಕಿರಣ ಹಾಗೂ ಕವಿಗೋಷ್ಠಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಕಡೆಗಣಿಸಲ್ಪಟ್ಟ ಈ ಸಮಾಜದ ಕೊನೆಯ ವ್ಯಕ್ತಿಯ ಒಳಿತಿಗಾಗಿ ಯಾರು ಶ್ರಮಿಸುತ್ತಾನೋ ಅವನೇ ನಿಜವಾದ ಕಾಂಗ್ರೆಸ್ಸಿಗ ಎಂದರು. ಹಾಗೆಯೇ ಶ್ರಮದಿಂದ ದುಡಿದು ಆದರ್ಶ ಬದುಕನ್ನು ಕಂಡುಕೊಳ್ಳಬೇಕೆಂಬ ಆಶಯವನ್ನೂ ಗಾಂಧಿ ಮತ್ತು ಸಮಾಜವಾದಿ ಬಸವಣ್ಣನವರು ಹಾಕಿಕೊಟ್ಟ ದಾರಿ ಗಟ್ಟಿಯಾದುದೆಂದರು.

ಹಿರಿಯ ಗಾಂಧಿ ಚಿಂತಕ ಎಲ್. ನರಸಿಂಹಯ್ಯನವರು ಗಾಂಧಿ ವಿಚಾರ ಧಾರೆಗಳ ಪ್ರಸ್ತುತತೆ ಕುರಿತ ಮಾತನಾಡಿ, ಅನ್ಯಾಯ , ಅಸಮಾನತೆಯ ವಿರುದ್ಧ ಟೊಂಕಕಟ್ಟಿ ನಿಂತವರು ಗಾಂಧೀಜಿ, ಹಾಗೆಯೇ ಗುರಿಎಷ್ಟು ಮುಖ್ಯವೋ , ದಾರಿ ಅಷ್ಟೇ ಮುಖ್ಯ, ಸಾಧನೆಗೆ ಸಂಕಲ್ಪವೇ ಮುಖ್ಯ ಎನ್ನುವುದನ್ನೂ ಈ ಸಮಾಜಕ್ಕೆ ಬಾಳಿ, ಬದುಕಿ ತೋರಿಸಿದವರು ಎಂದು ಉದ್ಧರಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿಯವರು ಹೇಳಿದ 5 ಸದ್ಗುಣಗಳಾದ ಕ್ಷಮೆ ಯಾಚನೆಲು ಮೊದಲು ನಾವೇ ಕ್ಷಮಿಸಬೇಕು. ದ್ವೇಷವನ್ನೂ ಪ್ರೀತಿಯಿಂದ ಸ್ವೀಕರಿಸಬೇಕು, ಸಮಾಜದಲ್ಲಿ ವಂಚಿತರಾದವರಿಗೆ ಅವಕಾಶ ಕಲ್ಪಿಸುವುದು ಮಾಡಿದ ತಪ್ಪನ್ನು ತಿದ್ದಿಕೊಳ್ಳುವುದು, ನಿರಾಡಂಬರ ಅಥವಾ ಸರಳತೆಯನ್ನು ಮೈಗೂಡಿಸಿಕೊಳ್ಳುವುದರ ಬಗ್ಗೆ ತಿಳಿಸಿದ್ದರು.

ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಪ್ರೊ. ಎಂ.ಆರ್.



ಶ್ರೀನಿವಾಸ್ ಮಾತನಾಡಿ, ಪ್ರೀತಿ ಮತ್ತು ಸತ್ಯ ಇವು ಒಂದೇ ನಾಣ್ಯದ ಎರಡು ಮುಖಗಳು ಎಂಬುದನ್ನು ಗಾಂಧೀಜಿ ತೋರಿಸಿಕೊಟ್ಟವರು ಮತ್ತು ವಕೀಲ ವೃತ್ತಿಯ ಸಂಪಾದನೆಯ ವ್ಯಾಮೋಹಕ್ಕಿಂತ ಆ ವೃತ್ತಿಯ ಘನತೆಗೆ ಹೆಚ್ಚು ಒತ್ತು ನೀಡಿದವರು ಎಂದರು.

ವೇದಿಕೆಯಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಚಂದ್ರಶೇಖರ್, ಟ್ರಸ್ಟ್‌ನ ಅಧ್ಯಕ್ಷ ಸಿಸಿರಾ, ಕಾರ್ಯದರ್ಶಿ ಹೇಮಾವತಿ, ಶಿಕ್ಷಣ ಸಂಸ್ಥೆಯ ಎ.ಆರ್. ಶ್ರೀನಿವಾಸಯ್ಯ, ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲೆ ಪ್ರೊ. ಆರ್. ಮಹಾಲಕ್ಷ್ಮಿ, ಪ್ರೊ. ಸಿ.ಮುನಿಯಪ್ಪ , ಉಪನ್ಯಾಸಕರಾದ ಟಿ.ಎಸ್. ಲೋಕೇಶ್ ಕುಮಾರ್, ಎಸ್.ಆರ್. ವೆಂಕಟೇಶ್ ಮತ್ತು ಡಾ. ಬಿ.ಎಸ್. ಅಶೋಕ ಕುಮಾರ್, ಸೂರ್ಯಪ್ರಕಾಶ್ ರೆಡ್ಡಿ ಜಿ. ನಾಗರಾಜ ರಾವ್ ಮುಂತಾದವರು ಹಾಜರಿದ್ದರು.

ಖ್ಯಾತ ಯುವ ಗಾಯಕ ಹೊಸಳ್ಳಿ ವಾಸುದೇವ್ ಮತ್ತು ತಂಡದವರಿಂದ ಜನಪದ ಗೀತೆಗಳ ಗಾಯನ ಮಮತಾ, ಬಿ. ರಮ್ಯ, ಆರ್. ರಶ್ಮಿ ತಂಡದವರಿಂದ ದೇಶ ಭಕ್ತಿಗೀತೆಗಳ ಗಾಯನ, ನೃತ್ಯ ಪ್ರದರ್ಶನ ಪ್ರೇಕ್ಷಕರ ಮನಸೂರೆಗೊಂಡವು.

ನಂತರ ದಾಸ ಸಾಹಿತ್ಯ, ವಚನ ಸಾಹಿತ್ಯ, ಕುರಿತು ವಿಚಾರ ಗೋಷ್ಠಿ ಹಾಗೂ ಕವಿಗೋಷ್ಠಿ ಕಾರ್ಯಕ್ರಮ ನಡೆಯಿತು.

ಡಾ. ಎಚ್.ಎನ್. ಮುರಳೀಧರ್, ಡಾ. ನಾ. ಗೀತಾಚಾರ್ಯ, ಕವಿತಾಕೃಷ್ಣ ಅ. ನಾ.ವೆಂ. ಶ್ರೀನಿವಾಸಮೂರ್ತಿ ಅವರು ಉಪನ್ಯಾಸ ಮತ್ತು ಸಂವಾದ ಕಾರ್ಯಕ್ರಮ ನಡೆಸಿಕೊಟ್ಟರು. ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಎಚ್.ಎಲ್. ಪುಷ್ಪಾ ಹಾಗೂ ವಿಚಾರ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಬೆಳ್ಳೂರು ಕೃಷ್ಣ ಅವರು, ಸಮಾರೋಪದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಖಜಾಂಚಿಗಳಾದ ಬಿ.ಎಂ. ಪಾರ್ಥಸಾರಥಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಉಪಪ್ರಾಂಶುಪಾಲರಾದ ಪ್ರೊ. ಎಸ್. ಸುರೇಶ್ ಭಾಗವಹಿಸಿದ್ದರು.

ಉದಯವಾಣಿ - 08 - 10 - 2011

# ಕಾರ್ಯಾಗಾರಗಳಿಂದ ಗುಣಮಟ್ಟದ ಶಿಕ್ಷಣ ಸಾಧ್ಯ: ಟಿ.ವಿ. ಸುಬ್ಬರಾವ್

ಬೆಂಗಳೂರು: ಸಂಶೋಧನಾ ಪದ್ಧತಿಯಂಥಹ ಕಾರ್ಯಾಗಾರಗಳಿಂದ ಶಿಕ್ಷಕರ ಮತ್ತು ಶಿಕ್ಷಣದ ಗುಣಮಟ್ಟ ಹೆಚ್ಚುತ್ತದೆ. ಆದ್ದರಿಂದ ಶಿಕ್ಷಣ ಸಂಸ್ಥೆಗಳಲ್ಲೂ ಇಂತಹ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು ಎಂದು ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿಯ (ಎನ್‌ಎಲ್‌ಎಸ್‌ಐಯು) ನಿರ್ದೇಶಕ ಟಿ.ವಿ. ಸುಬ್ಬರಾವ್ ಕರೆ ನೀಡಿದರು.

ನಗರದ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯಲ್ಲಿ ಶಿಕ್ಷಕರಿಗಾಗಿ ಸಂಜೆ ಪದವಿ ಕಾಲೇಜು ಆಯೋಜಿಸಿದ್ದ ರಿಸರ್ಚ್ ಮೆಥಡಾಲಜಿ ಬಗೆಗಿನ ಒಂದು ದಿನ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದರು.

ಶಿಕ್ಷಣ ದತ್ತಿಯ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ ಮಾತನಾಡಿ, ಕರ್ನಾಟಕದಲ್ಲಿರುವ ಶೀರಾ ಹಳೆಯ ವಿದ್ಯಾ ಸಂಸ್ಥೆಗಳಲ್ಲಿ ನಮ್ಮದು ಸಹ ಒಂದು. 1930ರಲ್ಲಿ ಸ್ಥಾಪಿಸಲ್ಪಟ್ಟ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಈಗ ಒಟ್ಟಾರೆ 24 ಶಿಕ್ಷಣ ಕೇಂದ್ರಗಳನ್ನು ನಡೆಸುತ್ತಿದೆ ಎಂದರು.

ಮಾಂಟ್‌ಕಾರ್ಮೆಲ್ ಕಾಲೇಜಿನ ಡೀನ್ ಡಾ. ಎಸ್. ರಮೇಶ್, ಐಎಸ್‌ಇಸಿ ಯ ಡಾ. ಅಬ್ದುಲ್ ಅಜೀಜ್, ಎಸ್‌ಐಎಂಎಸ್‌ನ ಡಾ. ಮೂರ್ತಿ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಡೀನ್ ಡಾ. ಕೆ. ಅನಂತಪದ್ಮ ಎರಡು ಹಾಗೂ ಮೂರನೆ ಹಂತದಲ್ಲಿ ಮಾತನಾಡಿದರು. ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಎಸ್‌ಇಡಿಸಿಯ ಪ್ರೊ. ಸಿ.ಎಲ್. ಬಸವರಾಜಯ್ಯ, ಸಂಜೆ ಪದವಿ ಕಾಲೇಜಿನ ಪ್ರಿನ್ಸಿಪಾಲ್ ಪ್ರೊ. ಚಂದ್ರಿಕಾ ಪುರಾಣಿಕ್ ಹಾಜರಿದ್ದರು.



ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಕಾರ್ಯಾಗಾರವನ್ನು ಎನ್‌ಎಲ್‌ಎಸ್‌ಐಯು ನಿರ್ದೇಶಕ ಟಿ.ವಿ. ಸುಬ್ಬರಾವ್ ಉದ್ಘಾಟಿಸಿದರು. ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ, ಡಾ. ವೂಡೇ ಪಿ. ಕೃಷ್ಣ, ಎ.ಆರ್. ಶ್ರೀನಿವಾಸಯ್ಯ, ಪ್ರೊ. ಚಂದ್ರಿಕಾ ಪುರಾಣಿಕ್ ಇತರರು ಭಾಗವಹಿಸಿದ್ದರು.

ಪ್ರಜಾವಾಣಿ 8.10.2011

# 'ಗಾಂಧಿ ಕಂಡ ಕನಸಿನಂತೆ ದೇಶ ಅಭಿವೃದ್ಧಿ ಆಗಲಿ'

ಪ್ರಜಾವಾಣಿ ವಾರ್ತೆ



ಬಿಸಿನೆಸ್ ಮ್ಯಾನೇಜ್‌ಮೆಂಟ್ ಆ್ಯಂಡ್ ಟೆಕ್ನಾಲಜಿ ಸಂಸ್ಥೆಯು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನದ ಸಹಯೋಗದಲ್ಲಿ ನಗರದ ವಿಟ್ರಿಯಾ ಹೋಟೆಲ್‌ನಲ್ಲಿ ಶುಕ್ರವಾರ ಹಮ್ಮಿಕೊಂಡಿದ್ದ 'ಗಾಂಧಿ ಮೌಲ್ಯಗಳು: ಕಾರ್ಪೊರೇಟ್ ಆಡಳಿತ ಮತ್ತು ಪ್ರಗತಿ' ಕುರಿತ ಮೂರು ದಿನಗಳ ಅಂತರರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ಗಾಂಧಿಜಿ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಚಿತ್ರದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಎಚ್.ಶ್ರೀನಿವಾಸಯ್ಯ, ಕೈನೆಟಿಕ್ ಸಮೂಹ ಸಂಸ್ಥೆಯ ಅರುಣ್ ಫಿರೋದಿಯಾ, ಸಂಸ್ಥೆಯ ನಿರ್ದೇಶಕ ಡಾ. ಅನಿಲ್ ರಾವತ್ ಮತ್ತಿತರರು ಇದ್ದಾರೆ.

ಬೆಂಗಳೂರು: 'ಬಡವರ ಪರವಾದ ಹಾಗೂ ಸಾಮಾಜಿಕ ನ್ಯಾಯದ ಪ್ರತಿಪಾದಕರಾಗಿದ್ದ ಮಹಾತ್ಮ ಗಾಂಧೀಜಿ ಅವರು ವಿಶ್ವದ ದೊಡ್ಡ ಪ್ರಜಾಪ್ರಭುತ್ವವಾದಿಯಾಗಿದ್ದರು. ಅವರು ಕಂಡ ಕನಸಿನಂತೆ ದೇಶದ ಅಭಿವೃದ್ಧಿ ಆಗಬೇಕಿದೆ' ಎಂದು ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ತಿಳಿಸಿದರು.

ಬಿಸಿನೆಸ್ ಮ್ಯಾನೇಜ್‌ಮೆಂಟ್ ಆ್ಯಂಡ್ ಟೆಕ್ನಾಲಜಿ ಸಂಸ್ಥೆಯು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಸಹಯೋಗದಲ್ಲಿ ನಗರದ ವಿಟ್ರಿಯಾ ಹೋಟೆಲ್‌ನಲ್ಲಿ ಶುಕ್ರವಾರ ಹಮ್ಮಿಕೊಂಡಿದ್ದ 'ಗಾಂಧಿ ಮೌಲ್ಯಗಳು: ಕಾರ್ಪೊರೇಟ್ ಆಡಳಿತ ಮತ್ತು ಪ್ರಗತಿ' ಕುರಿತ ಮೂರು ದಿನಗಳ ಅಂತರರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

'[illegible]ತ್ತು ವರ್ಷಗಳಿಂದ ಅಭಿವೃದ್ಧಿ ನಡೆದಿಲ್ಲ ಎನ್ನುವವರು ಇದ್ದಾರೆ. ಆದರೆ ದೇಶದ ಜಲಾಶಯಗಳು, ಕೈಗಾರಿಕೆಗಳು ಬದಲಾದ ಆರ್ಥಿಕ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿದಾಗ ಈ ಮಾತನ್ನು ಒಪ್ಪಲು ಸಾಧ್ಯವಿಲ್ಲ. ಅಭಿವೃದ್ಧಿ ನಡೆಯುತ್ತಿರುವುದು ನಿಜ. ಆದರೆ ಗಾಂಧಿ ಮಾದರಿಯ ಅಭಿವೃದ್ಧಿಗೆ ಹೆಚ್ಚು ಒತ್ತು ನೀಡಬೇಕಿದೆ' ಎಂದರು.

'ಒಂದು ದೇಶದ ಅಭಿವೃದ್ಧಿ ಆ ದೇಶದ ನಾಯಕರನ್ನು ಅವಲಂಬಿಸಿರುತ್ತದೆ. ಪ್ರತಿ ಸಂಸ್ಥೆಯೂ ಸುಧಾರಣೆಯಾದಾಗ ಅಭಿವೃದ್ಧಿಯಾಗುತ್ತದೆ. ಆದರೆ ದೇಶದ ವಿದ್ಯಾಸಂಸ್ಥೆಗಳು ಉತ್ತಮ ಬೋಧಕರನ್ನು ಹೊಂದದೇ ಇರುವುದು ದುರದೃಷ್ಟದ ಸಂಗತಿ' ಎಂದು ಹೇಳಿದರು.

'ದೇಶದ ಈಶಾನ್ಯ ಭಾಗದಿಂದ ದಕ್ಷಿಣದ ರಾಜ್ಯಗಳವರೆಗೆ ಎಲ್ಲರೂ ಗಾಂಧೀಜಿ ಅವರ ಆದರ್ಶವನ್ನು ಪ್ರತಿಪಾದಿಸುತ್ತಾರೆ. ಆದಿವಾಸಿಗಳು ನಿಜವಾಗಿಯೂ ಸತ್ಯದ ಪ್ರತಿಪಾದಕರು. ಒಡಿಶಾ, ಛತ್ತೀಸ್‌ಗಡ ಮುಂತಾದ ಪ್ರದೇಶಗಳಲ್ಲಿ ಈಗ ಶಾಂತಿ ನೆಲೆಸಿದೆ. ಪುನರ್ವಸತಿ ಮತ್ತು ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳುವ ಮೂಲಕ ಹಿಂಸಾಚಾರವನ್ನು ತೊಡೆದು ಹಾಕಬಹುದು' ಎಂದು ಅಭಿಪ್ರಾಯಪಟ್ಟರು.

'ಗಾಂಧೀಜಿ ಕೇವಲ ಆಧ್ಯಾತ್ಮಿಕ ನಾಯಕನಾಗಿರಲಿಲ್ಲ, ಬದಲಿಗೆ ರಾಷ್ಟ್ರ ನಿರ್ಮಾತೃವಾಗಿದ್ದರು. ದೇಶವನ್ನು ಮುನ್ನಡೆಸಲು ನೆಹರು, ಪಟೇಲ್, ಅಂಬೇಡ್ಕರ್, ಮೌಲಾನಾ ಆಜಾದ್, ಜಯಪ್ರಕಾಶ ನಾರಾಯಣ ಮುಂತಾದ ನಾಯಕರನ್ನು ಗಾಂಧೀಜಿ ರೂಪಿಸಿದರು. ಸತ್ಯವನ್ನು ನಂಬಿದ್ದ ಅವರು ಕೇವಲ ಅದನ್ನು ಬೋಧಿಸಲಿಲ್ಲ ಪರಿಪಾಲಿಸಿದರು. ಆಫ್ರಿಕಾದಲ್ಲಿ ಹಿಂದೂ, ಮುಸ್ಲಿಂ, ಕಪ್ಪು ವರ್ಣೀಯ, ಬಿಳಿ ವರ್ಣೀಯರು ಈಗಲೂ ಏಕತೆಯಿಂದ ಬದುಕುತ್ತಿರುವುದಕ್ಕೆ ಗಾಂಧೀಜಿ ಕೊಡುಗೆ ಅಪಾರ' ಎಂದು ಸ್ಮರಿಸಿದರು.

'ಯುವಕರು ಗಾಂಧಿ ಅವರ ತತ್ವಾದರ್ಶಗಳನ್ನು ನೆನೆದು ನಡೆಯಬೇಕಿದೆ. ಗಾಂಧಿವಾದಿಯಾಗಿ ಅದಕ್ಕೆ ವಿರುದ್ಧವಾಗಿ ನಡೆಯಬಾರದು. ಅಡ್ಡದಾರಿ ತುಳಿಯದೆ ಕಠಿಣ ಪರಿಶ್ರಮ, ನಿತ್ಯ ಅಭ್ಯಾಸಗಳಿಂದ ಮುನ್ನಡೆಯಬೇಕಿದೆ. ಪೋಷಕರೂ ಅಗತ್ಯ ಸಲಹೆ ನೀಡಬೇಕಿದೆ. ಶಾಸಕರು, ನ್ಯಾಯಾಧೀಶರು, ವೈದ್ಯರು, ಶಿಕ್ಷಕರು ಸೇರಿದಂತೆ ಎಲ್ಲರೂ ವೃತ್ತಿಪರ ನೈತಿಕತೆಯನ್ನು ಉಳಿಸಿಕೊಳ್ಳಬೇಕಿದೆ' ಎಂದರು.

ಇದಕ್ಕೂ ಮುನ್ನ ಮಾತನಾಡಿದ ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, 'ದೇಶದ 600 ಜಿಲ್ಲೆಗಳಲ್ಲಿ 220ಕ್ಕೂ ಹೆಚ್ಚು ಜಿಲ್ಲೆಗಳು ನಕ್ಸಲ್ ಪೀಡಿತ ಪ್ರದೇಶಗಳಾಗಿವೆ. ಯುವಕರಿಗೆ ಅಗತ್ಯವಾದ ಉದ್ಯೋಗ ಭದ್ರತೆ ಒದಗಿಸದಿರುವುದು ಇದಕ್ಕೆ ಕಾರಣ. 'ಎಲ್ಲರೂ ಉತ್ಪಾದನೆ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಬೇಕು' ಎಂದು ಗಾಂಧೀಜಿ ಬಯಸಿದ್ದರು. ಅವರ ಆರ್ಥಿಕ ನೀತಿಗಳನ್ನು ಅಳವಡಿಸಿಕೊಂಡರೆ ದೇಶದ ಜನರಿಗೆ ಉದ್ಯೋಗ ಒದಗಿಸುವುದು ಕಷ್ಟವಲ್ಲ' ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಎಚ್.ಶ್ರೀನಿವಾಸಯ್ಯ, ಕಾರ್ಯದರ್ಶಿ ಪ್ರೊ.ದಾಸೇಗೌಡ, ಸರ್ವೋದಯ ಅಂತರರಾಷ್ಟ್ರೀಯ ಟ್ರಸ್ಟ್‌ನ ವ್ಯವಸ್ಥಾಪಕ ಟ್ರಸ್ಟಿ ಟಿ.ಎ.ನಜರತ್, ಕೈನೆಟಿಕ್ ಸಮೂಹ ಸಂಸ್ಥೆಯ ಅರುಣ್ ಫಿರೋದಿಯಾ, ಉದ್ಯಮಿ ಪೂಜೆ ಟಿ. ಕೃಷ್ಣ, ಸಂಸ್ಥೆಯ ನಿರ್ದೇಶಕ ಡಾ. ಅನಿಲ್ ರಾವತ್, ಶಿಕ್ಷಣ ವಿಭಾಗದ ಡೀನ್ ಪ್ರೊ.ಅರುಣ್ ಮುಧೋಳ ಮದಲ್ಲಿ ಉಪಸ್ಥಿತರಿದ್ದರು.

## 'ಹೊಸ ಲೋಕಾಯುಕ್ತರ ನಿರೀಕ್ಷೆಯಲ್ಲಿ'

ಕಾರ್ಯಕ್ರಮದ ನಂತರ ಸುದ್ದಿಗಾರರೊಂದಿಗೆ ಮಾತನಾಡಿದ ರಾಜ್ಯಪಾಲ ಎಚ್.ಆರ್.ಭಾರದ್ವಾಜ್ 'ಲೋಕಾಯುಕ್ತರ ನೇಮಕ ಸಂಬಂಧ ಹೆಸರು ಸೂಚಿಸುವುದು ಸಾಧ್ಯವಿಲ್ಲ. ಸರ್ಕಾರದ ಸಲಹೆಯನ್ನು ಮಾನ್ಯ ಮಾಡಲಾಗುವುದು. ನೂತನ ಲೋಕಾಯುಕ್ತರ ನಿರೀಕ್ಷೆಯಲ್ಲಿ ಇರುವವರಲ್ಲಿ ನಾನೂ ಕೂಡ ಒಬ್ಬ' ಎಂದರು.

ಪ್ರಶ್ನೆಯೊಂದಕ್ಕೆ ಉತ್ತರಿಸಿದ ಅವರು 'ಗುಜರಾತ್‌ನಲ್ಲಿ ಉಂಟಾದ ಲೋಕಾಯುಕ್ತ ನೇಮಕ ಸಮಸ್ಯೆ ರಾಜ್ಯದಲ್ಲಿ ಉಂಟಾಗುವುದಿಲ್ಲ. ವಕೀಲನಾಗಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದೇನೆ. ಅಸಂವಿಧಾನಾತ್ಮಕ ಪ್ರಕ್ರಿಯೆಗೆ ಅವಕಾಶ ನೀಡುವುದಿಲ್ಲ' ಎಂದು ಹೇಳಿದರು.

---

ವಿಜಯ ಕರ್ನಾಟಕ
8.10.2011

# ಆರ್ಥಿಕ ಪ್ರಗತಿಗೆ ಆದ್ಯತೆ ನೀಡಿ



ಬೆಂಗಳೂರಿನಲ್ಲಿ ಶುಕ್ರವಾರ ನಡೆದ ವಿಚಾರ ಸಂಕಿರಣವನ್ನು ಹನ್ಸ್‌ರಾಜ್ ಭಾರದ್ವಾಜ್ ಅವರು ಗಾಂಧಿ ಭಾವಚಿತ್ರಕ್ಕೆ ಪುಷ್ಪ ಅರ್ಪಿಸುವ ಮೂಲಕ ಉದ್ಘಾಟಿಸಿದರು.

■ ವಿಕ ಸುದ್ದಿಲೋಕ ಬೆಂಗಳೂರು

ಗಾಂಧೀಜಿ ದೃಷ್ಟಿಕೋನದಲ್ಲಿ ರಾಷ್ಟ್ರದ ಆರ್ಥಿಕ ಪ್ರಗತಿಗೆ ಆದ್ಯತೆ ನೀಡಬೇಕು ಎಂದು ರಾಜ್ಯಪಾಲ ಹನ್ಸ್‌ರಾಜ್ ಭಾರದ್ವಾಜ್ ಹೇಳಿದರು.

ಇನ್‌ಸ್ಟಿಟ್ಯೂಟ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟ್ ಆ್ಯಂಡ್ ಟೆಕ್ನಾಲಜಿ ನಗರದಲ್ಲಿ ಆಯೋಜಿಸಿದ್ದ 'ಗಾಂಧಿ ಮೌಲ್ಯಗಳು: ಸುಸ್ಥಿರತೆ ಮತ್ತು ಕಾರ್ಪೊರೇಟ್ ಆಡಳಿತ ಕುರಿತ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಶುಕ್ರವಾರ ಮಾತನಾಡಿದರು.

ಗಾಂಧಿ ಪ್ರಣೀತ ಮೌಲ್ಯಗಳನ್ನು ಪ್ರತಿಯೊಬ್ಬ ಯುವಕರು ಅಳವಡಿಸಿಕೊಂಡು ರಾಷ್ಟ್ರ ಕಟ್ಟುವ ಕಾರ್ಯದಲ್ಲಿ ಭಾಗಿಯಾಗಬೇಕು. ದ್ವೇಷ ಯಾವುದೇ ಸಮಸ್ಯೆಗೂ ಪರಿಹಾರವಲ್ಲ. ಆದ್ದರಿಂದ ದ್ವೇಷ, ಅಸೂಯೆ ಬಿಟ್ಟು ಗಾಂಧೀಜಿ ಹಾಕಿಕೊಟ್ಟ ಅಹಿಂಸಾ ಮಾರ್ಗದಲ್ಲಿ ನಡೆದು ಸಮಾಜದಲ್ಲಿ ಶಾಂತಿ ಮತ್ತು ಏಕತೆ ಸಾಧಿಸಬೇಕು ಎಂದರು.

ಲೋಕಾಯುಕ್ತರ ನೇಮಕಕ್ಕೆ ಸಂಬಂಧಿಸಿದಂತೆ ಸರಕಾರ ಸಲ್ಲಿಸುವ ಶಿಫಾರಸು ಪಟ್ಟಿಯನು ನಾನೂ ನಿರೀಕ್ಷಿಸುತ್ತಿದ್ದೇನೆ. ನ್ಯಾ. ಶಿವರಾಜ್ [illegible] ಪಾಟೀಲರ ರಾಜೀನಾಮೆ ತರುವಾಯ ಸರಕಾರ ಈವರೆಗೆ ಲೋಕಾಯುಕ್ತರ ನೇಮಕಕ್ಕೆ ಸಂಬಂಧಿಸಿದಂತೆ [illegible] ಯಾವುದೇ ಪಟ್ಟಿಯನು ತಮಗೆ ಸಲ್ಲಿಸಿಲ್ಲ ಎಂದು ಭಾರದ್ವಾಜ್ ತಿಳಿಸಿದರು. [illegible] ಗುಜರಾತ್ ಮಾದರಿಯಲ್ಲಿ ಲೋಕಾಯುಕ್ತ ನೇಮಕ ನಡೆಯುವುದೇ ಎಂಬ ಪ್ರಶ್ನೆಗೆ, ನಾನು ಹಲವಾರು ವರ್ಷ ವಕೀಲನಾಗಿ ಸೇವೆ ಸಲ್ಲಿಸಿದ್ದೇನೆ. ಯಾವುದೇ ಅಸಂವಿಧಾನಿಕ ಕ್ರಮಗಳನ್ನು ಕೈಗೊಳ್ಳುವುದಿಲ್ಲ ಎಂದು ಸ್ಪಷ್ಟಪಡಿಸಿದರು.

ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್, ಹೊ.ಶ್ರೀನಿವಾಸಯ್ಯ, ದಾಸೇಗೌಡ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಪೂಜೆ ಟಿ.ಕೃಷ್ಣ ಟಿ.ಎ. ನಜರತ್, ಅರುಣ್ ಫಿರೋದಿಯ, ಪ್ರೊ.ಅರುಣ್ [illegible]



## ವಿಚಾರ ಸಂಕಿರಣ

ಗಾಂಧಿ ಜಯಂತಿ ಪ್ರಯುಕ್ತ ಶೇಷಾದಿಪುರ ಪದವಿ ಪೂರ್ವ ಕಾಲೇಜಿನಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣ ಮತ್ತು ಕವಿಗೋಷ್ಠಿಯನ್ನು ಸಾಹಿತಿ ಡಾ.ಎಲ್. ಹನುಮಂತಯ್ಯ ಉದ್ಘಾಟಿಸಿದರು. ನರಸಿಂಹಯ್ಯ, ಪ್ರೊ.ಪಿ.ಕೃಷ್ಣ, ಪ್ರಾಂಶುಪಾಲ ಎಂ.ಆರ್. ಶ್ರೀನಿವಾಸ್ ಭಾಗವಹಿಸಿದ್ದರು.

ಪ್ರಜಾವಾಣಿ

ಬುಧವಾರ
5ನೇ ಅಕ್ಟೋಬರ್ 2011

# 'ಸಸಿ ನೆಡಿ, ಭವಿಷ್ಯದ ಪೀಳಿಗೆಗೆ ನೆರಳಾಗಿ'

ಪ್ರಜಾವಾಣಿ ವಾರ್ತೆ

ಮಾಗಡಿ: 'ಪ್ರತಿಯೊಬ್ಬರು ಒಂದೊಂದು ಸಸಿ ನೆಟ್ಟು, ಮುಂದಿನ ಪೀಳಿಗೆಗೆ ನೆರಳಾಗೋಣ' ಎಂದು ಬೆಂಗಳೂರಿನ ಶೇಷಾದ್ರಿ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಕರೆ ನೀಡಿದರು.

ಅವರು ಸಾವನದುರ್ಗದ ತಪ್ಪಲಿನಲ್ಲಿರುವ ಹಂಚಿಕುಪ್ಪೆ ಗ್ರಾಮ ಪಂಚಾಯಿತಿ ವ್ಯಾಪ್ತಿಯ ವೀರೇಗೌಡನ ... ಮಹಲಿಂಗೇಶ್ವರ ಸ್ವಾಮಿ ಪ್ರೌಢಶಾಲೆಯ ಆವ...ದಲ್ಲಿ ಗಾಂಧಿ ಜಯಂತಿ ಅಂಗವಾಗಿ ಬೆಂಗಳೂರಿನ ಶೇಷಾದ್ರಿಪುರಂ ಪ್ರೌಢಶಾಲೆ, ಭಾರತ ಸೇವಾದಳ ಸರ್ವೋದಯ ಶಾಖೆಗಳು ಏರ್ಪಡಿಸಿದ್ದ ಸಸಿ ನೆಡುವ ಮತ್ತು ಬೀಜ ಬಿತ್ತುವ ಕಾರ್ಯಕ್ರಮಕ್ಕೆ ಸಸಿ ನೆಟ್ಟು ನೀರೆರೆದು ಚಾಲನೆ ನೀಡಿ ಮಾತನಾಡಿದರು.

ರಾಜ್ಯದ ಪ್ರಸಿದ್ಧ ನಿಸರ್ಗಗಿರಿಧಾಮ ಸಾವನದುರ್ಗದ ಸುತ್ತಮುತ್ತಲಿನ ಅರಣ್ಯವನ್ನು ಸಂರಕ್ಷಿಸಲು ನಾವೆಲ್ಲರೂ ಮುಂದಾಗಬೇಕಿದೆ. ಮರ ಕಡಿಯಲು ಪ್ರೋತ್ಸಾಹ ನೀಡುವುದಿಲ್ಲ. ಮರ ಕಡಿಯುವುದರ ವಿರುದ್ಧ ಜೀವಿತದ ಅವಧಿಯಲ್ಲಿ ಪ್ರತಿಭಟನೆ ಮಾಡೋಣ.

ಮರಗಿಡಗಳಿದ್ದರೆ ಮಾತ್ರ ಪ್ರಾಣಿ,ಪಕ್ಷಿ ನಾವೂ,ನೀವೂ ಎಂಬುದನ್ನು ಜನತೆಗೆ ಮನವರಿಕೆ ಮಾಡಿಕೊಡ ಬೇಕಿದೆ ಎಂದು ಮಕ್ಕಳೊಂದಿಗೆ ಪ್ರತಿಜ್ಞೆ ಸ್ವೀಕರಿಸಿದ ಡಾ. ವೂಡೇ ಪಿ. ಕೃಷ್ಣ ನೂರಾರು ದೇಶೀಯ ಸಸಿಗಳನ್ನು ನೆಟ್ಟು ನೀರೆರೆದರಲ್ಲದೆ ಭಾರತ ಸೇವಾದಳ ನಡೆದು ಬಂದ ದಾರಿ ಮತ್ತು ಸೇವಾಭಾವನೆಯನ್ನು ವಿವರಿಸಿದರು.

ಭಾರತ ಸೇವಾದಳ ಕೇಂದ್ರ ಸಮಿತಿಯ ಪ್ರಧಾನ ಕಾರ್ಯದರ್ಶಿ ಬಿ.ಸಿ. ವೆಂಕಟೇಶ್, ಬೀಜ ಬಿತ್ತುವ ಕಾರ್ಯಕ್ಕೆ ಚಾಲನೆ ನೀಡಿ ಮಾತನಾಡುತ್ತಾ, ಮುಂದಿನ ಪೀಳಿಗೆಗೆ ಪರಿಸರ ಪ್ರೇಮ ಮತ್ತು ಗಾಂಧೀಜಿಯವರ ಸತ್ಯ, ಅಹಿಂಸೆ, ಪ್ರಾಮಾಣಿಕತೆ ಇತರೆ ಗುಣಗಳನ್ನು ಬೆಳೆಸಲು ನಾವೆಲ್ಲರೂ ಇಂದಿನಿಂದಲೆ ಜಾಗೃತರಾಗಬೇಕಿದೆ ಎಂದರು.

ವಲಯ ಅರಣ್ಯಾಧಿಕಾರಿ ಶಾಂತಕುಮಾರ ಸ್ವಾಮಿ ಮಾತನಾಡಿ, ಸಾವಮದುರ್ಗದ ಸುತ್ತಮುತ್ತಲಿನ ಆದಿವಾಸಿ ಬುಡಕಟ್ಟು ಜನಾಂಗದ ಇರುಳಿಗ, ಸೋಲಿಗ, ಶಿಳ್ಳೇಕ್ಯಾತ, ಕಾಡುಗೊಲ್ಲ ಇನ್ನಿತರೆ ಜನಾಂಗದ ಅಭಿವೃದ್ಧಿಗೆ ಸರ್ಕಾರ ಹೆಚ್ಚಿನ ಯೋಜನೆಗಳನ್ನು ರೂಪಿಸಿ, ವನಸಂಪತ್ತು ರಕ್ಷಣೆಗೆ ಬೆಂಬಲ ನೀಡ ಬೇಕಿದೆ ಎಂದರು.



ಮಾಗಡಿ ಭಾರತ ಸೇವಾದಳ ಸರ್ವೋದಯ ಶಾಖೆ ಗಾಂಧೀ ಜಯಂತಿ ಅಂಗವಾಗಿ ಹಂಚಿಕುಪ್ಪೆ ಗ್ರಾ.ಪಂ. ವ್ಯಾಪ್ತಿಯ ವಿ.ಜಿ.ದೊಡ್ಡಿಯಲ್ಲಿ ಏರ್ಪಡಿಸಿದ್ದ ಸಸಿ ನೆಡುವ ಮತ್ತು ಬೀಜ ಬಿತ್ತುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಬೆಂಗಳೂರಿನ ಶೇಷಾದ್ರಿ ಪುರಂ ಪ್ರೌಢಶಾಲೆಯ ಮಕ್ಕಳು ಮತ್ತು ಶಿಕ್ಷಕರು ಹಾಗೂ ಸೇವಾದಳದ ಸದಸ್ಯರು ಇದ್ದರು.

ಉಪವಲಯ ಅರಣ್ಯಾಧಿಕಾರಿ ಹೊಸಪಾಳ್ಯ ಮನ್ಸೂರ್ ಪರಿಸರ ಸಂರಕ್ಷಣೆ ಕುರಿತು ಮಕ್ಕಳಿಗೆ ಬಾಲ್ಯದಲ್ಲಿಯೇ ಅರಿವು ಮೂಡಿಸುವಂತೆ ಮನವಿ ಮಾಡಿದರು.

ಸೇವಾದಳದ ಮಹಿಳಾ ವಿಭಾಗದ ಪ್ರಧಾನ ಕಾರ್ಯದರ್ಶಿ ಕಲ್ಪನಾ ಶಿವಣ್ಣ ಮಾತನಾಡಿ ಸಸಿ ನೆಟ್ಟು ನೀರೆರೆದು ಪೋಷಿಸಿ ಎಂದು ತಿಳಿಸಿದರು.

ತಾಲ್ಲೂಕಿನಲ್ಲಿ ಇರುವ ಅರಣ್ಯವನ್ನು ನಾಶವಾಗದಂತೆ ಕಾಪಾಡುವುದರ ಜೊತೆಗೆ ಮಗುವಿಗೊಂದು ಸಸಿ ನೆಡಲು ಜನತೆಯಲ್ಲಿ ಜಾಗೃತಿ ಮೂಡಿಸೋಣ ಎಂದು ತಾಲ್ಲೂಕು ಭಾರತ ಸೇವಾದಳದ ಅಧ್ಯಕ್ಷ ಎಚ್.ಶಿವಕುಮಾರ್ ತಿಳಿಸಿದರು. ಹಂಚಿಕುಪ್ಪೆ ಗ್ರಾ.ಪಂ. ಅಧ್ಯಕ್ಷೆ ಶಹನಾಜ್ ಬಾನು ಅಧ್ಯಕ್ಷತೆವಹಿಸಿದ್ದರು.

ಗ್ರಾ.ಪಂ. ಸದಸ್ಯ ಸಿದ್ದಲಿಂಗಪ್ರಸಾದ್, ಪಿ.ಡಿ.ಒ ಶಿವರಾಜಯ್ಯ, ಕೃಷ್ಣಸ್ವಾಮಿ, ಪಾರ್ಥಸಾರಥಿ, ಬೋರಯ್ಯ, ಶೇಷಗಿರಿಯಪ್ಪ, ಮುಖ್ಯೋಪಾಧ್ಯಾಯ ವೈ.ಷಡಕ್ಷರಯ್ಯ, ಶೇಷಾದ್ರಿಪುರಂ ಪ್ರೌಢಶಾಲೆಯ ಶಾಖಾ ನಾಯಕ ಆರ್.ರಂಗಣ್ಣ, ಜಿ.ಎನ್.ವಿನಯ ಕುಮಾರ್, ಪ್ಯಾರೇಜಾನ್ ಇದ್ದರು.

ಶೇಷಾದ್ರಿಪುರಂ ಶಾಲೆಯ ಶಿಕ್ಷಕರು, ಶಿಕ್ಷಕಿಯರು, ಮಕ್ಕಳು ನೂರಾರು ಸಸಿಗಳನ್ನು ನೆಟ್ಟರು. ಸಾವನದುರ್ಗದ ಅರಣ್ಯ ಪ್ರದೇಶದಲ್ಲಿರುವ ಸಸ್ಯಸಂಕುಲ ಹಾಗೂ ಪ್ರಾಣಿ ಸಂಕುಲಗಳನ್ನು ನೋಡಿ ನಗರದ ಮಕ್ಕಳು ಪುಳಕಿತರಾದರು.

ದೇಶಭಕ್ತಿ ಗೀತೆಗಳನ್ನು ಹಾಡಿ ಸಂತಸ ಪಟ್ಟರು. ವೀರೇಗೌಡನ ದೊಡ್ಡಿಯ ಗ್ರಾಮಸ್ಥರು ಹಾಗೂ ಮಹಲಿಂಗೇಶ್ವರ ಸ್ವಾಮಿ ಪ್ರೌಢಶಾಲೆಯ ಶಿಕ್ಷಕರು ಮತ್ತು ಮಕ್ಕಳು ಭಾಗವಹಿಸಿದ್ದರು.

ವಾರ್ತಾಭಾರತಿ ಸೋಮವಾರ, ಅಕ್ಟೋಬರ್ 3, 2011

# 'ಸತ್ಯಾಗ್ರಹದ ಶಕ್ತಿಯನ್ನು ಜಗತ್ತಿಗೆ ಮನವರಿಕೆ ಮಾಡಿಕೊಟ್ಟವರು ಗಾಂಧಿ'

ಬೆಂಗಳೂರು, ಅ.2: ಮಹಾತ್ಮ ಗಾಂಧೀಜಿಯವರು ಉಪವಾಸ ಸತ್ಯಾಗ್ರಹಕ್ಕೆ ಇರುವ ಶಕ್ತಿಯನ್ನು ಜಗತ್ತಿಗೆ ಮನವರಿಕೆ ಮಾಡಿಕೊಟ್ಟವರಲ್ಲಿ ಅಗ್ರಗಣ್ಯರು ಎಂದು ಹಿರಿಯ ಕವಿ ಡಾ.ಎಲ್.ಹನುಮಂತಯ್ಯ ಅಭಿಪ್ರಾಯಪಟ್ಟಿದ್ದಾರೆ.

ರವಿವಾರ ನಗರದ ಶೇಷಾದ್ರಿಪುರಂನ ಪದವಿ ಪೂರ್ವ ಕಾಲೇಜಿನಲ್ಲಿ ಕೇಂದ್ರ ಸಾಹಿತ್ಯ ಅಕಾಡಮಿ ಮತ್ತು ಬುದ್ಧ-ಬಸವ-ಗಾಂಧಿ ಸ್ಮಾರಕ ಟ್ರಸ್ಟ್ ವತಿಯಿಂದ ಗಾಂಧಿ ಜಯಂತಿ ಅಂಗವಾಗಿ ನಡೆದ ಗಾಂಧಿ ವಿಚಾರಗಳ ಪ್ರಸ್ತುತತೆ ಮತ್ತು ವಚನ-ದಾಸ ಸಾಹಿತ್ಯ ವಿಚಾರ ಸಂಕಿರಣ ಉದ್ಘಾಟಿಸಿ ಅವರು ಮಾತನಾಡಿದರು.

ಗಾಂಧೀಜಿ ರಾಜಕಾರಣಿಗಳಂತೆ ಖಾದಿಯನ್ನು ಧರಿಸದ, ಧರ್ಮಗುರುಗಳಂತೆ ಖಾವಿಯನ್ನೂ ಧರಿಸದೆ ಅರೆ ಬಟ್ಟೆಯ ಫಕೀರನಾಗಿ ಪ್ರಪಂಚವನ್ನು ಗೆದ್ದಿದ್ದಾರೆ. ಇಂದು ಗಾಂಧಿ ತತ್ವಗಳನ್ನು ತಿಳಿದುಕೊಳ್ಳದೆ ಗಾಂಧಿ ಬಗ್ಗೆ ಮಾತನಾಡುತ್ತಿದ್ದಾರೆ. ಗಾಂಧಿ ತತ್ವಗಳ ಬಗ್ಗೆ ಮಾತನಾಡುವುದಕ್ಕಿಂತ ಅವುಗಳನ್ನು ಅಳವಡಿಸಿಕೊಂಡರೆ ಗಾಂಧಿಗೆ ಗೌರವ ನೀಡಿದಂತೆ. ಸಮಾಜದ ಕಟ್ಟಕಡೆಯ ವ್ಯಕ್ತಿಯ ಏಳಿಗೆಗಾಗಿ ಯಾರು ಶ್ರಮಿಸುತ್ತಾರೆಯೋ ಅವರು ಮಾತ್ರ ನಿಜವಾದ ಗಾಂಧಿ ಅನುಯಾಯಿ ಅಥವಾ ಕಾಂಗ್ರೆಸಿಗನಾಗಲು ಸಾಧ್ಯ ಎಂದು ಅವರು ಹೇಳಿದರು.

ಗಾಂಧಿ ಮತ್ತು ಶರಣರು ಕಾಯಕದಿಂದಲೇ ಬದುಕು ಎನ್ನುವುದನ್ನು ಪ್ರಾಯೋಗಿಕವಾಗಿಯೇ ಬದುಕಿ ತೋರಿಸಿದ್ದಾರೆ. ಅವರ ಚಿಂತನೆಗಳ ಕುರಿತು ವಿಚಾರ ಸಂಕಿರಣ ಹಮ್ಮಿಕೊಂಡಿರುವುದು ಶ್ಲಾಘನೀಯ ಎಂದರು.

ಹಿರಿಯ ಗಾಂಧಿವಾದಿ ಎಲ್.ನರಸಿಂಹಯ್ಯ ಮಾತನಾಡಿ, ಇಂದು ಗಾಂಧಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ಹುಟ್ಟುಹಬ್ಬದ ಸಡಗರದಲ್ಲಿ ನಾವಿದ್ದೇವೆ. ಇಬ್ಬರು ಕೂಡ ಸಮಾಜದಲ್ಲಿನ ಅನ್ಯಾಯ-ಅಕ್ರಮ-ಅಸಮಾನತೆಗಳ ವಿರುದ್ಧ ಹೋರಾಡಿದ್ದಾರೆ. ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯುವುದು ಈ ಗಣ್ಯರಿಗೆ ಸಲ್ಲಿಸುವ ಮಹಾ ಗೌರವವಾಗಿದೆ ಎಂದು ತಿಳಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಮುಖ್ಯಸ್ಥ ಪ್ರೊ.ಡಿ.ಕೃಷ್ಣ, ಕಾಲೇಜಿನ ಪ್ರಾಂಶುಪಾಲ ಎಂ.ಆರ್.ಶ್ರೀನಿವಾಸ್, ಬುದ್ಧ, ಬಸವ, ಗಾಂಧಿ ಸ್ಮಾರಕ ಟ್ರಸ್ಟ್‌ನ ಎಸ್.ರಾಮಲಿಂಗೇಶ್ವರ್, ಕಾಲೇಜಿನ ಉಪನ್ಯಾಸಕ ಎ.ಆರ್.ಶ್ರೀನಿವಾಸಯ್ಯ, ಎನ್.ಎಸ್.ಎಸ್‌ನ ಟಿ.ಎಸ್.ಲೋಕೇಶ್‌ಕುಮಾರ್, ಎಸ್.ಆರ್.ವೆಂಕಟೇಶ್, ಬಿ.ಎಸ್.ಅಶೋಕ್‌ಕುಮಾರ್, ಪ್ರೊ.ಸಿ.ಮುನಿಯಪ್ಪ ಮತ್ತು ಪ್ರೊ.ಕೆ.ಎಸ್.ಸೂರ್ಯಪ್ರಕಾಶ್ ರೆಡ್ಡಿ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ, 03 ಅಕ್ಟೋಬರ್, 2011



ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ಹಮ್ಮಿಕೊಂಡಿದ್ದ ಸಂಶೋಧನಾ ಪದ್ಧತಿ ಕುರಿತ ಕಾರ್ಯಾಗಾರದಲ್ಲಿ ಟಿ.ವಿ.ಸುಬ್ಬರಾವ್, ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.

# ಭಾಷಾಭಿಮಾನ ರೂಢಿಸಿ-ಕನ್ನಡತನ ಬೆಳೆಸಿ

## ಶಿಕ್ಷಣ ತಜ್ಞ ಡಾ. ವೂಡೆ ಪಿ. ಕೃಷ್ಣ ಅವರಿಗೆ ಸನ್ಮಾನ



ಸಮಾರಂಭದಲ್ಲಿ ಶಿಕ್ಷಣ ತಜ್ಞ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌ. ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಸಿಸಿರಾ, ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಮೂಡ್ನಾಕೂಡು ಚನ್ನಸ್ವಾಮಿ ಮತ್ತು ಪಾನ್ಯಂ ನಟರಾಜ್ ಇದ್ದಾರೆ.

## ಪ್ರೊ. ಜಿ. ಅಶ್ವತ್ಥನಾರಾಯಣರಿಗೆ ಸನ್ಮಾನ



ಸಮಾರಂಭದಲ್ಲಿ ಸನ್ಮಾನಿತರಾದ ಹಿರಿಯ ವಿದ್ವಾಂಸ ಪ್ರೊ. ಜಿ. ಅಶ್ವತ್ಥನಾರಾಯಣ, ಸಿಸಿರಾ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಮೂಡ್ನಾಕೂಡು ಚನ್ನಸ್ವಾಮಿ, ಪಾನ್ಯಂ ನಟರಾಜ್ ಮೊದಲಾದವರಿದ್ದಾರೆ.

## ಪಾನ್ಯಂ ನಟರಾಜ್‌ರಿಗೆ ಸನ್ಮಾನ



ಸಮಾವೇಶದ ಸರ್ವಾಧ್ಯಕ್ಷರಾದ ಪಾನ್ಯಂ ನಟರಾಜ್ ಅವರನ್ನು ಸಮಾರಂಭದಲ್ಲಿ ಸನ್ಮಾನಿಸಲಾಯಿತು. ಡಾ. ಮೂಡ್ನಾಕೂಡು ಚನ್ನಸ್ವಾಮಿ, ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಸಿಸಿರಾ, ಎಲ್. ಹನುಮಂತಯ್ಯ, ಸು.ತ. ರಾಮೇಗೌಡ, ಡಾ. ವೂಡೇ ಕೃಷ್ಣ ಮತ್ತಿತರರಿದ್ದಾರೆ.

ಇಂದಿನ ಯುವ ಪೀಳಿಗೆ ಭಾಷಾಭಿಮಾನ ಬೆಳೆಸಿಕೊಂಡರಷ್ಟೆ ಕನ್ನಡತನ ಉಳಿಯಲು ಸಾಧ್ಯ ಎಂದು ಸಂಸ್ಕೃತಿ ಚಿಂತಕ ಪಾನ್ಯಂ ನಟರಾಜ್ ಅಭಿಪ್ರಾಯಪಟ್ಟರು. ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನಯನ ಸಭಾಂಗಣದಲ್ಲಿ ಏರ್ಪಡಿಸಿದ್ದ ರಾಜ್ಯಮಟ್ಟದ 2ನೇ ಕನ್ನಡ ಸಾಹಿತ್ಯ ಸಂಸ್ಕೃತಿ ಸಮಾವೇಶದ ಸರ್ವಾಧ್ಯಕ್ಷರಾಗಿ ಮಾತನಾಡಿದರು. ಇತರೆ ಭಾಷಿಕರಲ್ಲಿರುವಂತೆ ಕನ್ನಡಿಗರಲ್ಲಿ ಕನ್ನಡದ ಬಗೆಗಿನ ಭಾಷಾಭಿಮಾನ ಕಡಿಮೆಯಾಗುತ್ತಿರುವುದು ನಿಜಕ್ಕೂ ವಿಷಾದನೀಯ ಎಂದರು.

ಸಾಹಿತ್ಯದಿಂದ ರಾಜಕೀಯ ವ್ಯಕ್ತಿಗಳಲ್ಲಿ ನೈತಿಕತೆ ಹೆಚ್ಚುತ್ತದೆ. ರಾಜಕಾರಣಿಗಳು ಸಾಹಿತ್ಯ ಸಂಸ್ಕೃತಿಯ ಬಗ್ಗೆ ಒಲವು ಬೆಳೆಸಿಕೊಳ್ಳುವುದು ಇಂದಿನ ದಿನಮಾನಗಳಲ್ಲಿ ಅನಿವಾರ್ಯವಾಗಿದೆ ಎಂದು ಚಲನಚಿತ್ರ, ನಟ, ಅರಣ್ಯ ಖಾತೆ ಸಚಿವ ಸಿ.ಪಿ. ಯೋಗೇಶ್ವರ್ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು. ಅತಿಥಿಗಳಾಗಿ ಭಾಗವಹಿಸಿದ್ದ ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಂ.ಆರ್. ಶ್ರೀನಿವಾಸ್, ಭಯೋತ್ಪಾದನೆ, ನಕ್ಸಲಿಸಂ, ಭ್ರಷ್ಟಾಚಾರದಿಂದ ಸಾಹಿತ್ಯ ಸಂಸ್ಕೃತಿ ಉತ್ಸವಗಳು ಕಳೆಗುಂದುತ್ತಿದ್ದು ದೇಶ ಮತ್ತು ನಾಡಿನಲ್ಲಿ ಭಯದ ವಾತಾವರಣ ಮೂಡುತ್ತಿದೆ ಎಂದರು. ಖ್ಯಾತ ವಕೀಲ ವಿವೇಕ್ ಎಸ್. ರೆಡ್ಡಿ ಮಾತನಾಡಿ ಸಂಸ್ಕೃತಿ ಎನ್ನುವುದು ಮಗುವಿಗೆ ತಾಯಿಯ ಹಾಲಿದ್ದಂತೆ. ಪ್ರತಿಯೊಬ್ಬರಲ್ಲಿಯೂ ಹೆತ್ತ ತಾಯಿ ಹಾಗೂ ಜನ್ಮಭೂಮಿಯ ಬಗ್ಗೆ ಅಭಿಮಾನ, ಪ್ರೀತಿ ಬೆಳೆಯಬೇಕು ಎಂದರು.

ಕಾರ್ಯಕ್ರಮದಲ್ಲಿ ಸಮ್ಮೇಳನಾಧ್ಯಕ್ಷರ ಹೊಸಬೆಳಕು ಕಥಾಸಂಕಲನವನ್ನು ಕನ್ನಡ ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕ ಆ.ಕ. ಬಸವರಾಜಪ್ಪ ಬಿಡುಗಡೆಗೊಳಿಸಿ ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಜಾನಪದ ಅಕಾಡಮಿ ಅಧ್ಯಕ್ಷರಾದ ಗೊ.ರು. ಚನ್ನಬಸಪ್ಪನವರು, ಮನುಷ್ಯ ಪ್ರಸ್ತುತ ತಾನೇ ಸೃಷ್ಟಿಸಿಕೊಂಡ ವ್ಯೂಹದಲ್ಲಿ ಸಿಲುಕಿ ಬೆಂಗಳೂರಿನಂತಹ ನಗರಗಳಲ್ಲಿ ಸಾಹಿತ್ಯ ಸಂಸ್ಕೃತಿಯ ಅರಿವಿಲ್ಲದೆ ನರಳುವಂತಾಗಿದೆ. ಶಾಂತಿ, ಸಹನೆ, ಸಹಬಾಳ್ವೆ ಮನುಷ್ಯನಿಗೆ ಇರಬೇಕಾದರೆ ಪುಸ್ತಕ ಸಂಸ್ಕೃತಿ ಮತ್ತು ಜನಪದ ಕಲಾ ಸಂಸ್ಕೃತಿಯನ್ನು ನಮ್ಮಲ್ಲಿ ಮೈಗೂಡಿಸಿಕೊಳ್ಳಬೇಕು ಎಂದರು. ನಿಕಟಪೂರ್ವ ಸಮ್ಮೇಳನಾಧ್ಯಕ್ಷರಾದ ಗೋವಿಂದಳ್ಳಿ ದೇವೇಗೌಡರು, ಕನ್ನಡಪರ ಹಿರಿಯ ಹೋರಾಟಗಾರ ಸಂ. ನಂಜಪ್ಪ, ಪ್ರಗತಿಪರ ರೈತ ಕೆ. ಜಯರಾಂ, ತೋಟಗಾರಿಕೆ ಇಲಾಖೆಯ ಉಪ ನಿರ್ದೇಶಕ ಡಾ. ಬೆಳ್ಳೂರು ಕೃಷ್ಣ, ಸಂಸ್ಥೆಯ ಅಧ್ಯಕ್ಷರಾದ ಸಿಸಿರಾ ಮುಂತಾದ ಗಣ್ಯರು ವೇದಿಕೆಯಲ್ಲಿದ್ದರು.

### ವಿಚಾರಗೋಷ್ಠಿ ಹಾಗೂ ಕವಿಗೋಷ್ಠಿ:

ನಂತರ ನಡೆದ ವಚನ ಸಾಹಿತ್ಯ ಹಾಗೂ ದಾಸ ಸಾಹಿತ್ಯ ವಿಚಾರ ಸಂಕಿರಣ ಖ್ಯಾತ ನಾಟಕಕಾರ ಪ್ರೊ. ಎಲ್.ಎನ್. ಮುಕುಂದರಾಜ್‌ರವರ ಅಧ್ಯಕ್ಷತೆಯಲ್ಲಿ ವಿಮರ್ಶಕ ಪ್ರೊ. ವೀರಭದ್ರಪ್ಪ ಹಂಚಿನಮನೆಯವರು ವಚನ ಸಾಹಿತ್ಯ ಕುರಿತು, ಡಾ. ಮಧುಸೂಧನ ಜೋಷಿ ದಾಸ ಸಾಹಿತ್ಯ ಕುರಿತು ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಕನ್ನಡ ಶ್ರೀಸಾಮಾನ್ಯರ ಕೂಟದ ಅಧ್ಯಕ್ಷ ಶ್ರ.ದೇ. ಪಾರ್ಶ್ವನಾಥ್, ಸಮಾಜ ಸೇವಕ ಮಾಗಡಿಯ ಹೆಚ್.ಎಸ್. ಸುರೇಂದ್ರರವರು ಭಾಗವಹಿಸಿದ್ದರು.. ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಪ್ರಸಿದ್ಧ ಕವಿ ಡಾ. ಮೂಡ್ನಾಕೂಡು ಚನ್ನಸ್ವಾಮಿಯವರು ವಹಿಸಿದ್ದರು. ತ್ಯಾಮಗೊಂಡ್ಲು ಅಂಬರೀಶ್, ಸಾ.ಮಾ. ಶಿವಮಲ್ಲಯ್ಯ, ಬಿ.ಎಸ್. ಶ್ರೀನಾಥ್, ಡಾ. ಕೂಡ್ಲೂರು ವೆಂಕಟಪ್ಪ, ಲಕ್ಕೂರು ಆನಂದ್, ಚಿನ್ನು ಪ್ರಕಾಶ್ ಶ್ರೀರಾಮನಹಳ್ಳಿ, ಹಾ.ವೀ. ಮಂಜುಳಾ ಶಿವಾನಂದ್ ಮುಂತಾದವರು ತಮ್ಮ ಸ್ವರಚಿತ ಕವನಗಳನ್ನು ವಾಚಿಸಿದರು.

### ಸಮಾರೋಪ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭ:

ಸಂಜೆ ನಡೆದ ಸಾಂಸ್ಕೃತಿಕ ಸಮಾವೇಶದ ಸಮಾವೇಶದ ಸಮಾರೋಪ ಭಾಷಣ ಮಾಡಿದ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್‌ರವರು ಇಂದು ಕನ್ನಡ ನಾಡಿನಲ್ಲಿ ಸರ್ಕಾರದ ಕಾರ್ಯಕ್ರಮಗಳಿಗಿಂತಲೂ ಹೆಚ್ಚಾಗಿ ಖಾಸಗಿ ಸಂಘ ಸಂಸ್ಥೆಗಳು ಕನ್ನಡ ನಾಡು ನುಡಿ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಅಪಾರ ಅಭಿಮಾನ ಮೂಡಿಸಿಕೊಂಡು ಪ್ರಾಮಾಣಿಕವಾಗಿ ದುಡಿಯುತ್ತಿರುವುದನ್ನು ಶ್ಲಾಘಿಸಿದರು. ನಂತರ, ವಿದ್ವಾಂಸರಾದ ಪ್ರೊ. ಜಿ. ಅಶ್ವಥನಾರಾಯಣ, ಶಿಕ್ಷಣ ಕ್ಷೇತ್ರದ ಡಾ. ವೂಡೇ ಪಿ. ಕೃಷ್ಣ, ಸಾಮಾಜಿಕ ಹೋರಾಟದ ಡಾ. ಎಲ್. ಹನುಮಂತಯ್ಯ, ಸಾಂಸ್ಕೃತಿಕ ಕ್ಷೇತ್ರದ ಪ್ರೊ. ಎಂ. ಶಿವನಂಜಯ್ಯ, ಮಹಿಳಾ ಕ್ಷೇತ್ರದ ವಿಜಯ ನಾಗೇಶ್, ಸಮ್ಮೇಳನಾಧ್ಯಕ್ಷರಾದ ಪಾನ್ಯಂ. ನಟರಾಜ್‌ರವರನ್ನು ಮಲ್ಲೇಪುರಂ ಜಿ. ವೆಕಂಟೇಶ್‌ರವರು ಡಾ. ಮೂಡ್ನಾಕೂಡು ಚನ್ನಸ್ವಾಮಿ, ಮುಖ್ಯ ಅತಿಥಿಗಳಾದ ಹಿರಿಯ ಪತ್ರಕರ್ತರಾದ ಸು.ತ. ರಾಮೇಗೌಡರವರು, ಸಂಸ್ಥೆಯ ಅಧ್ಯಕ್ಷರಾದ ಸಿಸಿರಾರವರು ಪಾನ್ಯಂ ದತ್ತಿ ಪ್ರಶಸ್ತಿಯಾದ ನಗದು, ಶಾಲು, ಫಲಕ, ಫಲ ತಾಂಬೂಲಗಳನ್ನು ನೀಡಿ ಗೌರವಿಸಿ ಅಭಿನಂದಿಸಿದರು. ಕನ್ನಡಪರ ಹೋರಾಟಗಾರ ಟಿ. ತಿಮ್ಮೇಶ್, ಟ್ರಸ್ಟ್ ಸಂಚಾಲಕ ವಸಂತ್‌ಕುಮಾರ್, ಎಸ್.ಎಂ. ನಾಗೇಶ್, ಬಿ.ಎಸ್. ಬಸವರಾಜ್, ಎಂ.ಕೆ. ಸತೀಶ್ ಮುಂತಾದ ಗಣ್ಯರು ವೇದಿಕೆಯಲ್ಲಿದ್ದರು.

ಕಾರ್ಯಕ್ರಮಕ್ಕೆ ಮೊದಲು ಸಮ್ಮೇಳನಾಧ್ಯಕ್ಷರನ್ನು ಕಾರ್ಪೊರೇಷನ್ ವೃತ್ತದಿಂದ ರವೀಂದ್ರ ಕಲಾಕ್ಷೇತ್ರದವರೆಗೆ ವಾಹನದಲ್ಲಿ ನಾಗವಾರದ ಜಗದೀಶ್ ಮತ್ತು ತಂಡದವರ ಜನಪದ ಕಲಾ ಪ್ರದರ್ಶನಗಳೊಂದಿಗೆ ಮೆರವಣಿಗೆಯಲ್ಲಿ ಕರೆತರಲಾಯಿತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಾಯೋಜನೆಯಲ್ಲಿ ಸುಗಮ ಸಂಗೀತ ಕಾರ್ಯಕ್ರಮವನ್ನು ಹೊಸಳ್ಳಿ ವಾಸುದೇವ್, ಯು.ಎಂ. ರವಿ, ಸಿ. ಹೇಮಾವತಿ, ಸಾಕಮ್ಮ ಮತ್ತು ತಂಡ, ಕುಮಾರಿ ರಶ್ಮಿ, ಭೀಮ್‌ಜಿ ಮತ್ತು ತಂಡ, ಶಾರದಾ ನಾಗೇಶ್, ಕುಮಾರ್‌ರವರು ನಡೆಸಿಕೊಟ್ಟರು.

ಸಂಜೆವಾಣಿ
ಮಂಗಳವಾರ 13 ಸೆಪ್ಟೆಂಬರ್ 2011

# ಶೇಷಾದ್ರಿಪುರಂ ಕಾಲೇಜು ಘಟಿಕೋತ್ಸವ

ಬೆಂಗಳೂರು, ಸೆ. ೧೩- ನಗರದ ಶೇಷಾದ್ರಿಪುರಂ ಕಾಲೇಜಿನ 37ನೇ ಘಟಿಕೋತ್ಸವ ಸಮಾರಂಭ ಮತ್ತು ಪದವಿ ಪ್ರದಾನ ಕಾರ್ಯಕ್ರಮವನ್ನು ಸೆ. 17ರಂದು ಬೆಳಿಗ್ಗೆ 11 ಗಂಟೆಗೆ ಕಾಲೇಜಿನ ಸೆಮಿನಾರ್ ಹಾಲ್‌ನಲ್ಲಿ ಆಯೋಜಿಸಿದೆ.

ಕಾರ್ಯಕ್ರಮದಲ್ಲಿ ಗೌರವ ಅತಿಥಿಗಳಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಭಾಗವಹಿಸಲಿದ್ದು, ಘಟಿಕೋತ್ಸವದ ಭಾಷಣವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಡಾ. ಚಂದ್ರಶೇಖರ್ ಬಿ. ಕಂಬಾರರವರು ಮಾಡಲಿದ್ದಾರೆ ಹಾಗೂ ಸಮಾರಂಭದ ಅಧ್ಯಕ್ಷತೆಯನ್ನು ಎನ್.ಆರ್. ಪಂಡಿತಾರಾಧ್ಯ ವಹಿಸುವರು ಎಂದು ಪ್ರಕಟಣೆ ತಿಳಿಸಿದೆ.

ಪ್ರಜಾವಾಣಿ ಗುರುವಾರ 8 ನೇ ಸೆಪ್ಟೆಂಬರ್ 2011



ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಶಿಕ್ಷಕರ ದಿನಾಚರಣೆಯಲ್ಲಿ ನಿವೃತ್ತ ಪ್ರಾಂಶುಪಾಲ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರನ್ನು ಸನ್ಮಾನಿಸಲಾಯಿತು. ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್.ಮಂಜುನಾಥ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ ಇತರರು ಚಿತ್ರದಲ್ಲಿದ್ದಾರೆ

# 'ವಿದ್ಯಾರ್ಥಿಗಳಿಗೆ ಸಾಮಾನ್ಯ ಜ್ಞಾನ ಗಳಿಕೆ ಅಗತ್ಯ'

ಯಲಹಂಕ: ವಿದ್ಯಾರ್ಥಿಗಳು ಪದವಿ ಶಿಕ್ಷಣ ಪಡೆಯುವ ಜತೆಗೆ ಸಾಮಾನ್ಯ ಜ್ಞಾನ ಗಳಿಸಿಕೊಳ್ಳುವುದೂ ಬಹಳ ಮುಖ್ಯ ಎಂದು ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್.ಮಂಜುನಾಥ್ ಅಭಿಪ್ರಾಯಪಟ್ಟರು.

ಇಲ್ಲಿನ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ಸ್ನೇಹ-ಸಮ್ಮಿಲನ ಹಾಗೂ ಶಿಕ್ಷಕರ ದಿನಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, ಕೇವಲ ಅತ್ಯುತ್ತಮ ಅಂಕ ಗಳಿಸುವುದರಿಂದ ಮಾತ್ರ ಉತ್ತಮ ಪ್ರಜೆಯಾಗಲು ಸಾಧ್ಯವಿಲ್ಲ. ಬದಲಿಗೆ ವಿನಯ, ಸಂಸ್ಕಾರ ಮತ್ತು ನಾಗರಿಕತೆಯ ಗುಣಗಳನ್ನು ಬೆಳೆಸಿಕೊಳ್ಳಬೇಕು ಎಂದು ಸಲಹೆ ಮಾಡಿದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ 12 ಹಿರಿಯರನ್ನು ಗೌರವಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ, ಉಪಾಧ್ಯಕ್ಷರಾದ ಟಿ.ಎಸ್ ಹೆಂಜಾರಪ್ಪ, ಡಬ್ಲ್ಯು.ಎಚ್.ಅನಿಲ್ ಕುಮಾರ್, ಕೋಶಾಧ್ಯಕ್ಷ ಬಿ.ಎಂ. ಪಾರ್ಥಸಾರಥಿ, ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಸಹಾಯಕ ಕಾರ್ಯದರ್ಶಿ ಸರೋಜಾ ಕೆ.ಎಂ. ನಂಜಪ್ಪ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಇತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಶನಿವಾರ 3ನೇ ಸೆಪ್ಟೆಂಬರ್ 2011



ಶೇಷಾದ್ರಿಪುರ ಕಾಲೇಜಿನಲ್ಲಿ ಇತ್ತೀಚೆಗೆ ಹಮ್ಮಿಕೊಂಡಿದ್ದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ಪಿಎಚ್.ಡಿ ಪದವಿ ಪಡೆದ ಡಾ.ಶರ್ಮಿಳಾ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಪ್ರೊ.ಎಂ.ಡಿ.ರಾಜನ್, ಭಾರತೀಯ ವಿಜ್ಞಾನ ಸಂಸ್ಥೆಯ ಹಿರಿಯ ವಿಜ್ಞಾನಿ ಡಾ.ಗೋಪಾಲನ್ ಜಗದೀಶ್ ಉಪಸ್ಥಿತರಿದ್ದರು

# ಪರಿಸರ ಸಂರಕ್ಷಣೆ ಎಲ್ಲರ ಕರ್ತವ್ಯ

ಕೆಂಗೇರಿ ಉಪನಗರ: ಪರಿಸರ ನಿರ್ಲಕ್ಷಿಸಿದರೆ ಅದರಿಂದ ದೊರಕುವ ಎಲ್ಲ ಸೌಲಭ್ಯಗಳಿಂದ ನಾವು ವಂಚಿತರಾಗಬೇಕಾಗುತ್ತದೆ ಎಂದು ಸಾಲುಮರದ ತಿಮ್ಮಕ್ಕ ತಿಳಿಸಿದರು.

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಆಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಪದವಿ ಕಾಲೇಜಿನ ಈಕೋ ಕ್ಲಬ್ ಗ್ರೀನ್ ಮಷಿನ್‌ನಿಂದ ಏರ್ಪಡಿಸಿದ್ದ 'ಪರಿಸರ ಮತ್ತು ಸಂರಕ್ಷಣೆ ಸಂಚಲನ' ಎಂಬ ವಿಚಾರ ಸಂಕೀರ್ಣವನ್ನು ಉದ್ಘಾಟಿಸಿ ಮಾತನಾಡಿದರು.

ಪರಿಸರವಾದಿ ಡಾ. ಯಲ್ಲಪ್ಪರೆಡ್ಡಿ ಮಾತನಾಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ. ವಿ.ಪಿ. ಕೃಷ್ಣ ಸಹಾಯಕ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ನಿರ್ದೇಶಕ ವೀರಭದ್ರಯ್ಯ, ಬೆಂಗಳೂರು ವಿವಿ ಪರಿಸರ ವಿಜ್ಞಾನ ವಿಭಾಗದ ಮುಖ್ಯಸ್ಥೆ ಡಾ. ಆರ್. ನಂದಿನಿ ಉಪಸ್ಥಿತರಿದ್ದರು.

ವಿಕ ಚಿತ್ರಲೋಕ




ಶೇಷಾದ್ರಿಪುರಂ ಕಾಲೇಜಿನ ಈಕೋ ಕ್ಲಬ್ ಗ್ರೀನ್ ಮಷಿನ್ ವತಿಯಿಂದ ಪರಿಸರ ಮತ್ತು ಸಂರಕ್ಷಣೆ ಕುರಿತು ಸಂಚಲನ ಎಂಬ ವಿಚಾರ ಸಂಕೀರ್ಣವನ್ನು ಸಾಲುಮರದ ತಿಮ್ಮಕ್ಕ ಉದ್ಘಾಟಿಸಿದರು.

ಈ ಸಂಜೆ

ಭಾನುವಾರ, 21 ಆಗಸ್ಟ್, 2011



ಶೇಷಾದ್ರಿಪುರಂ ಕಾಲೇಜು ಆಯೋಜಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ಭಾರತೀಯ ವಿಜ್ಞಾನ ಸಂಸ್ಥೆ ಹಿರಿಯ ವಿಜ್ಞಾನಿ ಡಾ. ಗೋಪಾಲನ್ ಜಗದೀಶ್ ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹಾಗೂ ಕಾಲೇಜು ಪ್ರಾಂಶುಪಾಲ ಪ್ರೊ. ಎಂ.ಡಿ. ರಾಜನ್ ಹಾಜರಿದ್ದರು.

ಸಂಜೆವಾಣಿ

ಭಾನುವಾರ 21 ಆಗಸ್ಟ್ 2011



ನಗರದ ಶೇಷಾದ್ರಿಪುರಂ ಕಾಲೇಜು ಆಯೋಜಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ಅತಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಭಾರತೀಯ ವಿಜ್ಞಾನ ಸಂಸ್ಥೆಯ ಹಿರಿಯ ವಿಜ್ಞಾನಿ ಡಾ. ಗೋಪಾಲನ್ ಜಗದೀಶ್ ಪ್ರಶಸ್ತಿಪತ್ರ ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ಡಾ. ವೂಡೇ ಪಿ. ಕೃಷ್ಣ ಹಾಗೂ ಪ್ರೊ. ಎಂ.ಡಿ. ರಾಜನ್ ಇದ್ದಾರೆ.



ಶನಿವಾರ, 20 ಆಗಸ್ಟ್ 2011 | ಕನ್ನಡಪ್ರಭ

## ಗೌರವ

ಬೆಂಗಳೂರು ವಿವಿ ಪರೀಕ್ಷೆಗಳಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ಭಾರತೀಯ ವಿಜ್ಞಾನ ಸಂಸ್ಥೆಯ ಹಿರಿಯ ವಿಜ್ಞಾನಿ ಡಾ. ಗೋಪಾಲನ್ ಪ್ರಶಸ್ತಿ ನೀಡಿ ಗೌರವಿಸಿದರು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಮತ್ತು ಪ್ರಾಂಶುಪಾಲ ಪ್ರೊ. ಎಂ.ಡಿ. ರಾಜನ್ ಉಪಸ್ಥಿತರಿದ್ದರು.

ಈ ಸಂಜೆ

ಬುಧವಾರ,03 ಆಗಸ್ಟ್, 2011



ಸೈಕಲ್ ಯಾತ್ರೆ.. ಅರಣ್ಯ ಮತ್ತು ಹುಲಿ ಸಂರಕ್ಷಣೆಗಾಗಿ ಜಾಗೃತಿ ಮೂಡಿಸಲು ಇಂದು ಶೇಷಾದ್ರಿಪುರಂ ಕಾಲೇಜಿನ ಎನ್ ಎಸ್ ಎಸ್ ಘಟಕದ ವಿದ್ಯಾರ್ಥಿಗಳು ಕೈಗೊಂಡ ಸೈಕಲ್ ಯಾತ್ರೆ ಅಭಿಯಾನಕ್ಕೆ ಡಾ.ಬಿ.ಕೆ.ದನಂಜಯ ಚಾಲನೆ ನೀಡಿದರು. ಕಾಲೇಜಿನ ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

ಈ ಸಂಜೆ

ಶುಕ್ರವಾರ, 02 ಆಗಸ್ಟ್, 2011

# ವಿದ್ಯಾರ್ಥಿಗಳು ಯಶಸ್ಸಿನತ್ತ ಗಮನ ಹರಿಸಲಿ




ಬೆಂಗಳೂರು, ಸೆ.2- ಯುವಕರು ಜೀವನದಲ್ಲಿ ಯಶಸ್ವಿಯಾಗಬೇಕಾದರೆ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಬೇಕು ಎಂದು ಸಿಆರ್‌ಪಿಎಫ್‌ನ ಡಿಐಜಿ ಕೆ.ಅರ್ಕೇಶ್ ಕಿವಿಮಾತು ಹೇಳಿದರು.

ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನಲ್ಲಿ ಏರ್ಪಡಿಸಿದ್ದ ರಾಷ್ಟ್ರ ಕಟ್ಟುವಿಕೆಯಲ್ಲಿ ಯುವಕರ ಪಾತ್ರ ಮತ್ತು ಮಿಲಿಟರಿ ಹಾಗೂ ಅರೆ ಮಿಲಿಟರಿ ಪಡೆಗಳಲ್ಲಿ ಯುವಕರ ಪಾತ್ರ ಎಂಬ ವಿಷಯ ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಅವರು ಮಾತನಾಡಿದರು.

ಕುಟುಂಬದಲ್ಲಿ ಯಾವುದೇ ರೀತಿಯ ಲಿಂಗ ತಾರತಮ್ಯ ಮಾಡದೆ ಸಮಾನತೆ ಎಂಬುದು ಕುಟುಂಬದಿಂದಲೇ ಪ್ರಾರಂಭವಾಗಬೇಕು ಎಂದರು.

ರಾಷ್ಟ್ರವನ್ನು ಕಟ್ಟಬೇಕಾದರೆ ಯುದ್ಧ ಮಾಡಬೇಕಾಗಿಲ್ಲ. ತಮ್ಮ ಯಶಸ್ಸಿನೆಡೆಗೆ ಗಮನ ಹರಿಸಿದರೆ ಅದೇ ರಾಷ್ಟ್ರ ಕಟ್ಟಿದಂತಾಗುತ್ತದೆ ಎಂದ ಅವರು, ನಮ್ಮ ರಾಷ್ಟ್ರದಲ್ಲಿ ಯಾವುದೇ ಧರ್ಮವನ್ನು ಸ್ವೀಕರಿಸಲು ಸಂವಿಧಾನದಲ್ಲಿ ಸ್ವಾತಂತ್ರ್ಯವಿದೆ. ಆದರೆ ಅದು ಮಾನವ ಧರ್ಮವಾಗಬೇಕು ಎಂದು ಅರ್ಕೇಶ್ ಸಲಹೆ ನೀಡಿದರು.

ಉಪನ್ಯಾಸ ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ, ಸಹಾಯಕ ಕಾರ್ಯದರ್ಶಿ ಶ್ರೀನಿವಾಸಯ್ಯ, ಪ್ರೊ. ಬಸವರಾಜಯ್ಯ, ಪ್ರಾಂಶುಪಾಲ ಪ್ರೊ. ಚಂದ್ರಿಕಾ ಪುರಾಣಿಕ್, ಪ್ರೊ. ಲಕ್ಷ್ಮಣ್ ಪಾಲ್ಗೊಂಡಿದ್ದರು.

ಈ ಸಂಜೆ
ಸೋಮವಾರ, 25 ಜುಲೈ, 2011



ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಿದ್ದ ಸಮಾಂಭದಲ್ಲಿ ಮೈಸೂರಿನ ಶ್ರೀಸತ್ಯೇಶಾನಂದಜೀ ಮಹಾರಾಜ್ ಅವರು ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಪ್ರೋತ್ಸಾಹಿಸಿದರು. ಸಂಸ್ಥೆ ಅಧ್ಯಕ್ಷ ಪಂಡಿತಾರಾಧ್ಯ, ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ, ಪಾರ್ಥಸಾರಥಿ, ಪ್ರಾಂಶುಪಾಲ ಶ್ರೀನಿವಾಸ್ ಉಪಸ್ಥಿತರಿದ್ದರು.

ಪ್ರಜಾವಾಣಿ ಶನಿವಾರ 2 ಜುಲೈ 2011



ನ್ಯಾಕ್ 'ಎ' ಶ್ರೇಣಿ ಪಡೆದ ಶೇಷಾದ್ರಿಪುರಂ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ಆಯೋಜಿಸಿದ್ದ ಸಂತೋಷ ಕೂಟದಲ್ಲಿ ಕಾಲೇಜಿನ ಮಾಜಿ ಪ್ರಾಂಶುಪಾಲ ಹಾಗೂ ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಮಣ್ಯ ಅವರನ್ನು ಸನ್ಮಾನಿಸಲಾಯಿತು. ತುಮಕೂರು ವಿಶ್ವವಿದ್ಯಾಲಯದ ಕುಲಪತಿ ಡಾ. ಎಸ್.ಸಿ. ಶರ್ಮಾ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹಾಜರಿದ್ದರು.

ಈ ಸಂಜೆ

ಬುಧವಾರ, 22 ಜೂನ್, 2011




ಶೇಷಾದ್ರಿಪುರಂ ಕಾಲೇಜಿನಲ್ಲಿ ಶೈಕ್ಷಣಿಕ ವರ್ಷದ ಪದವಿ ತರಗತಿಗಳ ಆರಂಭ ಕಾರ್ಯಕ್ರಮದಲ್ಲಿ ದ್ವಿತೀಯ ಪಿಯುಸಿಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳನ್ನು ಕನ್ನಡ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪ್ರೊ. ಎಂ. ಎಚ್. ಕೃಷ್ಣಯ್ಯ ಬಹುಮಾನ ವಿತರಿಸಿದರು. ಕಾಲೇಜಿನ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ, ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು.



ಗುರುವಾರ 23 ಜೂನ್ 2011

ಇತ್ತೀಚೆಗೆ ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ಪ್ರಥಮ ಪದವಿ ವಿದ್ಯಾರ್ಥಿಗಳ ಪುನಃಶ್ಚೇತನ ಕಾರ್ಯಕ್ರಮದಲ್ಲಿ ದ್ವಿತೀಯ ಪಿಯುಸಿಯಲ್ಲಿ 90ಕ್ಕೂ ಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪ್ರೊ. ಎಂ.ಎಚ್. ಕೃಷ್ಣಯ್ಯ ಅವರು ಪ್ರತಿಭಾ ಪುರಸ್ಕಾರ ನೀಡಿದರು. ಎನ್.ಆರ್. ಪಂಡಿತಾರಾಧ್ಯ, ಡಾ. ವೂಡೇ ಪಿ. ಕೃಷ್ಣ ಹಾಗೂ ಪ್ರೊ. ಎಂ.ಡಿ. ರಾಜನ್ ಮುಂತಾದವರು ಚಿತ್ರದಲ್ಲಿದ್ದಾರೆ.

ಪ್ರಜಾವಾಣಿ
ಭಾನುವಾರ 03ನೇ ಜುಲೈ 2011

## ಸನ್ಮಾನ



ಶೇಷಾದ್ರಿಪುರ ಕಾಲೇಜಿನ ಸಂತೋಷ ಕೂಟದಲ್ಲಿ ವಿಮರ್ಶಕ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಅವರನ್ನು ಸನ್ಮಾನಿಸಲಾಯಿತು. ತುಮಕೂರು ವಿವಿ ಕುಲಪತಿ ಡಾ.ಎಸ್.ಸಿ.ಶರ್ಮಾ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಇದ್ದರು

ಸಂಜೆವಾಣಿ | ಭಾನುವಾರ 24 ಜುಲೈ 2011

# ಓದಿನ ಜೊತೆ ಕೌಶಲ್ಯವೂ ಬೆಳೆಯಲಿ



ಬೆಂಗಳೂರು, ಜು.24- ವಿದ್ಯಾರ್ಥಿಗಳು ದೇಶ ಸುತ್ತಿ ಕೋಶ ಓದುವುದರ ಜೊತೆ ಜೊತೆಗೆ ಜೀವನ ಕೌಶಲ್ಯಗಳನ್ನು ರೂಢಿಸಿಕೊಳ್ಳಬೇಕೆಂದು ಆರ್.ಸಿ. ಪದವಿ ಕಾಲೇಜಿನ ಪ್ರಾಂಶುಪಾಲ ಡಾ. ವೇಣುಗೋಪಾಲ್ ಕಿವಿಮಾತು ಹೇಳಿದರು.

ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ದತ್ತಿ ಸಭಾಂಗಣದಲ್ಲಿ ಪ್ರಥಮ ಪಿಯು ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಅವರು ಮಾತನಾಡಿದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ ಮಾತನಾಡಿ, ಶಿಕ್ಷಣವೆಂದರೆ ಕ್ಷಣ-ಕ್ಷಣದ ಕಲಿಕೆ. ನಿರಂತರವಾಗಿ ಓದುತ್ತಿದ್ದರೆ ಉನ್ನತ ಮಟ್ಟಕ್ಕೆ ಏರುವುದರಲ್ಲಿ ಸಂಶಯವೇ ಇಲ್ಲ ಎಂದು ವಿದ್ಯಾರ್ಥಿಗಳಿಗೆ ತಿಳಿಸಿದರು.

ವಿದ್ಯಾರ್ಥಿಗಳು ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳಲ್ಲೂ ತೊಡಗಿಸಿಕೊಳ್ಳಬೇಕೆಂದರು. ಕಾರ್ಯಕ್ರಮದ ಮೊದಲಿಗೆ ಕಾಲೇಜಿನ ಪ್ರಾಂಶುಪಾಲರಾದ ಮಹಾಲಕ್ಷ್ಮಿ ಅವರು ಸಭೆಗೆ ಆಗಮಿಸಿದ ಗಣ್ಯರನ್ನು ಸ್ವಾಗತಿಸಿದರು.

ದತ್ತಿ ಅಧ್ಯಕ್ಷ ಪಂಡಿತಾರಾಧ್ಯ, ಆಡಳಿತ ಪರಿಷತ್ತಿನ ಅಧ್ಯಕ್ಷ ಎಸ್. ವೀರಭದ್ರಯ್ಯ, ದತ್ತಿಯ ಖಜಾಂಚಿಗಳಾದ ಪಾರ್ಥಸಾರಥಿ, ಕೃಷ್ಣಸ್ವಾಮಿ, ಸೌಂದರ್ಯ ಪದವಿ ಕಾಲೇಜಿನ ಪ್ರಾಂಶುಪಾಲರಾದ ಗಣೇಶ್, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನ ಪ್ರಾಂಶುಪಾಲರಾದ ಚಂದ್ರಿಕಾ ಪುರಾಣಿಕ್ ಉಪಸ್ಥಿತರಿದ್ದರು. ಉಪನ್ಯಾಸಕ ಮುರಳಿ ಮೋಹನ್, ಗಣಿತ ವಿಜ್ಞಾನ ಉಪನ್ಯಾಸಕ ನಾಗರಾಜ್ ನಿರೂಪಿಸಿ ವಂದಿಸಿದರು.

ಈ ಸಂಜೆ

ಮಂಗಳವಾರ, 05-ಜುಲೈ, 2011



ನ್ಯಾಕ್‌ನ ಎ ಶ್ರೇಣಿ ಪಡೆದ ಶ್ರೇಷಾದ್ರಿಪುರ ಕಾಲೇಜಿನ ಬೋಧಕ ಮತ್ತು ಬೋಧಕೇತರ ವರ್ಗಕ್ಕೆ ಹಮ್ಮಿಕೊಂಡಿದ್ದ ಸಂತೋಷಕೂಟದಲ್ಲಿ ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರನ್ನು ಸನ್ಮಾನಿಸಲಾಯಿತು. ತುಮಕೂರು ವಿವಿ ಕುಲಪತಿ ಡಾ. ಶರ್ಮಾ, ಸಂಸ್ಥೆಯ ಪಂಡಿತಾರಾಧ್ಯ, ಗೌ. ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಹಾಜರಿದ್ದರು.



## ಸಂತೋಷ ಕೂಟ...

ಶೇಷಾದ್ರಿಪುರ ಕಾಲೇಜು ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ಏರ್ಪಡಿಸಿದ್ದ ಸಂತೋಷ ಕೂಟದಲ್ಲಿ ಕಾಲೇಜಿನ ನಿವೃತ್ತ ಪ್ರಾಂಶುಪಾಲ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರನ್ನು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಸನ್ಮಾನಿಸಿದರು. ಡಾ. ವೂಡೇ ಪಿ. ಕೃಷ್ಣ ಇತರರು ಇದ್ದರು.

ಈ ಸಂಜೆ

ಭಾನುವಾರ, 24 ಜುಲೈ 2011




ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ಎಸ್.ಎಸ್.ಎಲ್.ಸಿಯಲ್ಲಿ ಶೇ. 90ಕ್ಕಿಂತ ಹೆಚ್ಚು ಅಂಕ ಪಡೆದ ನಂದಿನಿ ಎಂಬುವರಿಗೆ ಮೈಸೂರಿನ ರಾಮಕೃಷ್ಣ ವಿದ್ಯಾಶಾಲಾದ ಸ್ವಾಮೀಜಿ 5000 ರೂ. ನಗದು ಹಾಗೂ ಪ್ರಮಾಣ ಪತ್ರ ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಪ್ರೊ.ಎಂ.ಆರ್. ಶ್ರೀನಿವಾಸ್, ಸತ್ಯೇಶಾನಂದ ಮಹಾರಾಜ್ ಮತ್ತಿತರರು ಉಪಸ್ಥಿತರಿದ್ದರು.

ಶನಿವಾರ, 23 ಜುಲೈ 2011 | ಕನ್ನಡಪ್ರಭ

## ಪ್ರತಿಭಾ ಪುರಸ್ಕಾರ...



ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು ಏರ್ಪಡಿಸಿದ್ದ ಪುನಶ್ಚೇತನ ಹಾಗೂ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸತ್ಯೇಶಾನಂದಜೀ ಮಹಾರಾಜ್ ಅವರು ಪ್ರೋತ್ಸಾಹ ಧನ ನೀಡಿ ಗೌರವಿಸಿದರು. ಶಿಕ್ಷಣ ತಜ್ಞ ವೊಡೇ ಪಿ. ಕೃಷ್ಣ, ಪ್ರೊ.ಎಂ.ಆರ್. ಶ್ರೀನಿವಾಸ್, ಎನ್.ಆರ್. ಪಂಡಿತಾರಾಧ್ಯ ಇತರರು ಇದ್ದರು.

ಸಂಜೆವಾಣಿ

ಭಾನುವಾರ 10 ಜುಲೈ 2011



ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳನ್ನು ವೀರೇಶಾನಂದ ಸರಸ್ವತಿ ಸ್ವಾಮೀಜಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಡಾ. ವೂಡೇ, ಪಿ ಕೃಷ್ಣ, ಎನ್ ಆರ್ ಪಂಡಿತಾರಾಧ್ಯ, ಪ್ರೊ. ಎಂ.ಎಚ್. ಕೃಷ್ಣಯ್ಯ, ಪ್ರೊ. ಚಂದ್ರಿಕಾ ಪುರಾಣಿಕ ಪಾಲ್ಗೊಂಡಿದ್ದರು.

ಮಂಗಳವಾರ, 14 ಜೂನ್ 2011 | ಕನ್ನಡಪ್ರಭ

## ರಕ್ತದಾನ ಶಿಬಿರ...



ಸೂಪರ್‌ಸ್ಟಾರ್ ರಜನೀಕಾಂತ್ ಶೀಘ್ರ ಗುಣಮುಖರಾಗಲೆಂದು ಹಾರೈಸಿ ಹಾಗೂ ವಿಶ್ವ ರಕ್ತದಾನ ದಿನ ಅಂಗವಾಗಿ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಸಹಭಾಗಿತ್ವದಲ್ಲಿ ವಿವಿಧ ಸಂಘ-ಸಂಸ್ಥೆಗಳು ಹಮ್ಮಿಕೊಂಡಿದ್ದ ರಕ್ತದಾನ ಶಿಬಿರದಲ್ಲಿ ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯಾ, ವೂಡೇ ಪಿ. ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು.

ಉದಯವಾಣಿ

ಮಂಗಳವಾರ | ಜೂನ್ | 14 | 2011



# ರಕ್ತದಾನ

ವಿಶ್ವ ರಕ್ತದಾನಿಗಳ ದಿನಾಚರಣೆ ಅಂಗವಾಗಿ ನಟ ರಜನಿಕಾಂತ್ ಅಭಿಮಾನಿಗಳ ಸಂಘ ಬೆಂಗಳೂರಿನ ಗೋಸಾಯಿ ಮಠದಲ್ಲಿ ಸೋಮವಾರ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಮಠದ ಸ್ವಾಮೀಜಿ ಸೇರಿದಂತೆ ಹಲವು ಮಂದಿ ರಕ್ತದಾನ ಮಾಡಿದರು. ಪಿ.ಜೆ.ಆರ್. ಸಿಂಧ್ಯ ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ, 13 ಜೂನ್, 2011

# ರಜನಿಕಾಂತ್ ಆರೋಗ್ಯ ಸುಧಾರಣೆಗೆ ವಿಶಿಷ್ಟ ಕಾರ್ಯಕ್ರಮ

ಬೆಂಗಳೂರು, ಜೂ.13- ಸೂಪರ್ ಸ್ಟಾರ್ ರಜನಿಕಾಂತ್ ಆರೋಗ್ಯ ಸುಧಾರಣೆಗಾಗಿ ವಿಶ್ವ ಸ್ವಯಂ ರಕ್ತದಾನಿಗಳ ದಿನವನ್ನಾಗಿ ನಗರದ ಗೋಸಾಯಿ ಮಹಾಸಂಸ್ಥಾನ ಮಠದಲ್ಲಿಂದು ವಿಶೇಷ ಕಾರ್ಯಕ್ರಮ ಆಚರಿಸಲಾಯಿತು.

ರಾಜ್ಯ ಸ್ವಯಂ ಪ್ರೇರಿತ ರಕ್ತದಾನಿಗಳ ಸಂಘ ಇಂದು ಆಯೋಜಿಸಿದ್ದ ವಿಶೇಷ ಕಾರ್ಯಕ್ರಮದಲ್ಲಿ ಗೋಸಾಯಿ ಮಹಾಸಂಸ್ಥಾನದ ಶ್ರೀ ಸುರೇಶಾನಂದ ಭಾರತಿ ಸ್ವಾಮೀಜಿ, ಮಾಜಿ ಸಚಿವ ಪಿ.ಜಿ.ಆರ್.ಸಿಂಧ್ಯಾ , ಸಂಘದ ರಾಜೀವ್ ಚಂದ್ರಶೇಖರ್, ಸತ್ಯನಾರಾಯಣರಾವ್ ಗಾಯಕವಾಡ ಸೇರಿದಂತೆ ಹಲವಾರು ಮಂದಿ ಪಾಲ್ಗೊಂಡಿದ್ದರು. ಇದೇ ವೇಳೆ ರಕ್ತದಾನ ಮಾಡಿ ಮಾತನಾಡಿದ ಸಿಂಧ್ಯಾ, ಸಿಂಗಾಪುರದಲ್ಲಿ ಚಿಕಿತ್ಸೆಗೆ ದಾಖಲಾಗಿರುವ ರಜನೀಕಾಂತ್ ಆದಷ್ಟು ಶೀಘ್ರ ಗುಣಮುಖರಾಗಲಿ ಎಂದು ಹಾರೈಸಿ, ಭಾರತ ಕಂಡ ಅತ್ಯಂತ ಜನಪ್ರಿಯ ನಟರಲ್ಲಿ ರಜನೀಕಾಂತ್ ಒಬ್ಬರು ಎಂದರು.

ರಜನೀಕಾಂತ್ ತಮಿಳು ಚಿತ್ರಗಳಲ್ಲಿ ಹೆಚ್ಚಾಗಿ ನಟಿಸಿದ್ದರೂ ಅವರ ಅಭಿಮಾನಿಗಳು ಭಾರತದಾದ್ಯಂತ ಇದ್ದಾರೆ. ಸಿಂಗಾಪುರ, ಜರ್ಮನಿ, ಅಮೆರಿಕಾ, ಇಂಗ್ಲೆಂಡ್‌ನಲ್ಲಿಯೂ ಅಭಿಮಾನಿಗಳನ್ನು ಹೊಂದಿದ್ದಾರೆ ಎಂದರು. ರಜನೀಕಾಂತ್ ಶೀಘ್ರ ಚೇತರಿಸಿಕೊಂಡು ಅವರು ಮತ್ತೆ ಬೆಳ್ಳಿ ಪರದೆಗೆ ಬರಬೇಕು. ನಟರಾದ ಛತ್ರಪತಿ ಶಿವಾಜಿ, ಎಂ.ಟಿ.ರಾಮರಾವ್, ಡಾ.ರಾಜಕುಮಾರ್ ಮಟ್ಟದಲ್ಲಿ ರಜನಿ ಬೆಳೆದಿದ್ದಾರೆ. ಆದಷ್ಟು ಶೀಘ್ರ ಚೇತರಿಸಿಕೊಳ್ಳಲಿ ಎಂದು ಅವರು ಹಾರೈಸಿದರು.



ಉದಯವಾಣಿ

ಶುಕ್ರವಾರ | ಜೂನ್ | 3 | 2011

# ಕಾಮನ್‌ವೆಲ್ತ್ ಸಮ್ಮೇಳನಕ್ಕೆ ಡಾ.ಪ್ರೊಡೇ ಕೃಷ್ಣ



ಬೆಂಗಳೂರು: ಮಲೇಷಿಯಾದಲ್ಲಿ ಜೂನ್ 6 ರಿಂದ 8ರವರೆಗೆ ನಡೆಯಲಿರುವ ಅಂತಾರಾಷ್ಟ್ರೀಯ ಮಾನವೀಯ ಕಾನೂನಿನ ಮೂರನೇ ಕಾಮನ್‌ವೆಲ್ತ್ ಸಮ್ಮೇಳನಕ್ಕೆ ರೆಡ್ ಕ್ರಾಸ್ ಅಂತಾರಾಷ್ಟ್ರೀಯ ಸಮಿತಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿಣಿ ಸದಸ್ಯ ಡಾ. ಪೂಡೇ ಪಿ. ಕೃಷ್ಣ ಅವರನ್ನು ಆಯ್ಕೆ ಮಾಡಿದೆ.

ಪ್ರಜಾವಾಣಿ ಶುಕ್ರವಾರ 3ನೇ ಜೂನ್ 2011

# ಸಮ್ಮೇಳನಕ್ಕೆ ಆಯ್ಕೆ

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿಣಿ ಸದಸ್ಯ ಡಾ.ವೂಡೇ ಪಿ. ಕೃಷ್ಣ ಅವರು ಮಲೇಷ್ಯಾದಲ್ಲಿ ನಡೆಯಲಿರುವ ಅಂತರರಾಷ್ಟ್ರೀಯ ಮಾನವೀಯ ಕಾನೂನಿನ ಮೂರನೇ ಕಾಮನ್‌ವೆಲ್ತ್ ಸಮ್ಮೇಳನಕ್ಕೆ ಆಯ್ಕೆಯಾಗಿದ್ದಾರೆ. ಸಮ್ಮೇಳನವು ಜೂನ್ 6ರಿಂದ 8ರ ವರೆಗೆ ಜರುಗಲಿದೆ. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷರಾಗಿಯೂ ಅವರು ಸೇವೆ ಸಲ್ಲಿಸಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಸ್ಥಾಪನೆಯಾಗಿರುವ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯಲ್ಲಿ ನರ್ಸರಿಯಿಂದ ಆಡಳಿತ ನಿರ್ವಹಣೆವರೆಗೆ ಶಿಕ್ಷಣ ನೀಡಲಾಗುತ್ತಿದೆ. ಎಲ್ಲ ಕಡೆ ಉತ್ತಮ ಗ್ರಂಥಾಲಯಗಳನ್ನು ಸ್ಥಾಪಿಸಿ ಅಲ್ಲಿ ಮಕ್ಕಳ ಜ್ಞಾನಾರ್ಜನೆಗೆ ಅವಶ್ಯಕವಾಗುವಂತಹ ಪುಸ್ತಕಗಳನ್ನು ಒದಗಿಸಲಾಗಿದೆ. ಮುಖ್ಯವಾಗಿ ದೇಶಪ್ರೇಮಿಗಳ ಕುರಿತ ಪುಸ್ತಕಗಳನ್ನು ಇಲ್ಲಿ ಇಡಲಾಗಿದ್ದು ಪ್ರತಿಯೊಬ್ಬ ವಿದ್ಯಾರ್ಥಿ ಇವುಗಳನ್ನು ಅಧ್ಯಯನ ಮಾಡುವಂತೆ ಮನದಟ್ಟು ಮಾಡಲಾಗುತ್ತಿದೆ. ಇದರಿಂದ ಇಲ್ಲಿ ಕಲಿಯುವ ವಿದ್ಯಾರ್ಥಿಗಳು ಇತರೆ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುವುದಕ್ಕಿಂತ ಭಿನ್ನವಾಗಿದ್ದು, ದೇಶಪ್ರೇಮದ ಬಗ್ಗೆ ಹೆಚ್ಚು ಅಭಿಮಾನ ಹೊಂದಿದವರಾಗಿರುತ್ತಾರೆ.

ಶಿಕ್ಷಣ ಇಂದು ವ್ಯಾಪಾರೀಕರಣವಾಗುತ್ತಿದೆ. ಬೃಹತ್ ಪ್ರಮಾಣದ ಕಟ್ಟಡಗಳನ್ನು ಕಟ್ಟಿ ಅಲ್ಲಿ ಹಲವು ಸೌಲಭ್ಯಗಳನ್ನು ಒದಗಿಸಿ ವಿದ್ಯಾರ್ಥಿಗಳ ಪೋಷಕರಿಂದ ಹಣ ಸುಲಿಗೆಯ ಮಂತ್ರವನ್ನು ಜಪಿಸುವವರು ಹಲವಾರು ಮಂದಿ. ಆದರೆ, ಉತ್ತಮ ಗುಣಮಟ್ಟದ ಶಿಕ್ಷಣದ ಜತೆಗೆ ದೇಶದ ಪ್ರಗತಿಗೆ ಅನುಕೂಲವಾಗುವಂತಹ ವಿದ್ಯಾರ್ಥಿಗಳನ್ನು ರೂಪಿಸಬೇಕೆಂದು ಕನಸು ಕಂಡವರು ವೂಡೇ ಪಿ. ಕೃಷ್ಣ. ಅದನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಮೂಲಕ ಸಾಕಾರಗೊಳಿಸುತ್ತಿದ್ದಾರೆ.

ಉತ್ತಮ ಶಿಕ್ಷಣ ನೀಡಬೇಕು ಎಂಬ ತಮ್ಮ ಕನಸಿಗೆ ಸಾಕಾರರೂಪ ನೀಡಲು ಹಲವು ಯೋಜನೆಗಳನ್ನು ಹಮ್ಮಿಕೊಂಡು ನುರಿತ ಶಿಕ್ಷಕರ ಮೂಲಕ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ನೀಡಿ ಪೋಷಕರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಈ ಶಿಕ್ಷಣ ಸಂಸ್ಥೆಯಲ್ಲಿ ಕಲಿಯಲು ಬರುವ ವಿದ್ಯಾರ್ಥಿಗಳಿಗೆ ಕೇವಲ ವಿದ್ಯೆ ನೀಡುವಷ್ಟರ ಮಟ್ಟಿಗೆ ತಮ್ಮ ಕಾರ್ಯ ಮುಗಿಯಿತು ಎಂದು ಭಾವಿಸುವುದಿಲ್ಲ. ವಿದ್ಯೆ ಜತೆಗೆ ದೇಶದ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಿದ ಮಹನೀಯರ ಕುರಿತು ಅರಿವು ಮೂಡಿಸುವುದಲ್ಲದೆ ಪಠ್ಯೇತರ ಚಟುವಟಿಕೆಗಳಿಗೂ ಆದ್ಯತೆ ನೀಡಿ ಮಕ್ಕಳು ಸದಾ ಕಾಲ ಚಟುವಟಿಕೆಯಿಂದ ಇರುವಂತೆ ನೋಡಿಕೊಳ್ಳಲಾಗುತ್ತಿದೆ.

ಇಲ್ಲಿ ಕಲಿಯಲು ಬರುವ ವಿದ್ಯಾರ್ಥಿಗಳು ಬುದ್ಧಿವಂತರಾಗಿ ಹೊರಹೊಮ್ಮಬೇಕಲ್ಲದೆ ದೇಶದ ಪ್ರಗತಿಗೆ ಶ್ರಮಿಸುವಂತೆ ಮಾಡಲು ನುರಿತ ಶಿಕ್ಷಕ-



ಶಿಕ್ಷಕಿಯರ ವರ್ಗವೇ ಇಲ್ಲಿದೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ಕಲಿಯಲು ಬರುವ ಮಕ್ಕಳು ಶಿಕ್ಷಕರು ಹೇಳಿದ್ದನ್ನೇ ಕೇಳಿಕೊಂಡು ಹೋಗುವುದಲ್ಲ. ತಮಗೆ ಅನುಮಾನ ಬಂದ ವಿಷಯವನ್ನು ಮುಕ್ತವಾಗಿ ಕೇಳಿ ಪರಿಹರಿಸಿಕೊಳ್ಳಬಹುದಾಗಿದೆ. ಇಲ್ಲಿ ಬದಲಾದ ಪರಿಸ್ಥಿತಿಗೆ ತಕ್ಕಂತೆ ಹಂತ ಹಂತವಾಗಿ ಹಲವು ವಿಷಯಗಳನ್ನು ಸೇರಿಸಿಕೊಂಡು ಈಗಿನ ಮಟ್ಟಿಗೆ ಬೇಕಾದ ಶಿಕ್ಷಣವನ್ನು ಒದಗಿಸತೊಡಗಿದೆ.

ಇಲ್ಲಿ ಕಲಿಯಲು ಬರುವ ಮಕ್ಕಳು ಸರಿಯಾದ ದಾರಿಯಲ್ಲಿ ಸಾಗಲು ಮಂದಿ ನುರಿತ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲಾಗಿದೆ. ವಿಶೇಷವೆಂದರೆ ಇಲ್ಲಿ ಶಿಕ್ಷಕ-ಶಿಕ್ಷಕಿಯರ ನೇಮಕವನ್ನು ಕಾಟಾಚಾರಕ್ಕೆ ಮಾಡಿಕೊಳ್ಳುವುದಿಲ್ಲ. ಅವರಲ್ಲಿನ ಬೋಧನಾಮಟ್ಟವನ್ನು ಪರೀಕ್ಷಿಸಲಾಗುತ್ತದೆ. ಅದರಲ್ಲಿ ಉತ್ತೀರ್ಣರಾದಲ್ಲಿ ಮಾತ್ರ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲಾಗುತ್ತದೆ. ಮಕ್ಕಳಿಗೆ ಕಲಿಸಲು ಶಿಕ್ಷಕರು ಬೇಕು ಎಂದು ಇಲ್ಲಿ ಪರಿಗಣಿಸುವುದಿಲ್ಲ. ಶಿಕ್ಷಕರಾದವರು ಕನಿಷ್ಠ ಶಿಕ್ಷಣವನ್ನು ಪಡೆದಿದ್ದರೆ ಮಾತ್ರ ಇಲ್ಲಿ ಪರಿಗಣಿಸಲಾಗುತ್ತದೆ. ಏಕೆಂದರೆ ಒಬ್ಬ ಉತ್ತಮ ಪ್ರಜೆಯನ್ನು ನಿರ್ಮಾಣ ಮಾಡಬೇಕಾದರೆ ಶಿಕ್ಷಕರ ಪಾತ್ರ ಮುಖ್ಯ ಎಂಬುದು ವೂಡೇ ಪಿ. ಕೃಷ್ಣ ಅವರ ಅಭಿಪ್ರಾಯ.

ಶಿಕ್ಷಣ ಸಂಸ್ಥೆಯಲ್ಲಿ ನಿಯಮಿತವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ವಿದ್ಯಾರ್ಥಿಗಳು ಸದಾ ಕಾಲ ಚಟುವಟಿಕೆಯಿಂದ ಇರುವಂತೆ ನೋಡಿಕೊಳ್ಳಲಾಗುತ್ತಿದೆ. ಇಂತಹ ಕಾರ್ಯಕ್ರಮಗಳಲ್ಲಿ ದೇಶದ ಸಂಸ್ಕೃತಿಯನ್ನು ಬಿಂಬಿಸುವಂತಹ ಕಾರ್ಯಕ್ರಮಗಳಿಗೆ ಒತ್ತು ನೀಡಲಾಗುತ್ತದೆ. ಹಾಗೆಯೇ ಪಾಶ್ಚಾತ್ಯದ ಬಗ್ಗೆಯೂ ತಿಳಿದುಕೊಳ್ಳಲು ಕೊಂಚ ಅವಕಾಶ ನೀಡಿ ಅವರ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಡಲಾಗುತ್ತಿದೆ. ಆದರೆ, ನಾಡಿನ ಸಂಸ್ಕೃತಿಗೆ ಪ್ರಥಮ ಆದ್ಯತೆ ಇಲ್ಲಿದೆ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ದೇಶಪ್ರೇಮ, ಶಿಸ್ತಿಗೆ ಆದ್ಯತೆ ನೀಡುತ್ತಿರುವುದರಿಂದ ಇಲ್ಲಿ ಕಲಿತವರು ದೇಶ ವಿದೇಶಗಳಲ್ಲಿನ ಅನೇಕ ಕಂಪನಿಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ವಿದೇಶದಲ್ಲಿದ್ದರೂ ಅಲ್ಲಿನ ಸಂಸ್ಕೃತಿಗೆ ಮಾರುಹೋಗದೆ ನಮ್ಮ ಮಣ್ಣಿಗೆ ಪ್ರಥಮಾದ್ಯತೆ ನೀಡುತ್ತಿದ್ದಾರಂತೆ. ಅಂದರೆ ಇದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಮಹತ್ವ ಎಂದರೆ ತಪ್ಪಲ್ಲ.

– ಪ್ರ.ಸಂ.

ಸಂಯುಕ್ತ ಕರ್ನಾಟಕ

14-6-2011

# ರಜನಿ ಚೇತರಿಕೆಗೆ ರಕ್ತದಾನ ದಿನಾಚರಣೆ



ವಿಶ್ವ ರಕ್ತದಾನ ದಿನಾಚರಣೆ ಮತ್ತು ಸೂಪರ್ ಸ್ಟಾರ್ ರಜನಿಕಾಂತ್ ಶೀಘ್ರಗುಣಮುಖರಾಗಲೆಂದು ಆಶಿಸಿ ಬೆಂಗಳೂರಿನ ಗೋಸ್ವಾಮಿ ಮಠದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಶ್ರೀ ಸುರೇಶ್ವರಾನಂದ ಭಾರತಿ ಸ್ವಾಮೀಜಿ, ರಜನೀಕಾಂತ್ ಸಹೋದರ ಸತ್ಯನಾರಾಯಣ್ ರಾವ್ ಗಾಯಕ್‌ವಾಡ್ ರಕ್ತದಾನ ಮಾಡಿದರು. ಈ ಸಂದರ್ಭದಲ್ಲಿ ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯಾ ಇನ್ನಿತರರು ಹಾಜರಿದ್ದರು.

**ಬೆಂಗಳೂರು, ಜೂ. 13:** ಗೋಸಾಯಿ ಮಹಾಸಂಸ್ಥಾನ ಮಠವು ನಟ ರಜನಿಕಾಂತ್ ಆರೋಗ್ಯ ಚೇತರಿಕೆಗಾಗಿ ವಿಶ್ವ ಸ್ವಯಂ ರಕ್ತದಾನ ದಿನವನ್ನು ಸೋಮವಾರ ಆಚರಿಸಿತು.

ನಗರದಲ್ಲಿ ಹಮ್ಮಿಕೊಳ್ಳಲಾಗಿದ್ದ ಶಿಬಿರಕ್ಕೆ ಚಾಲನೆ ನೀಡಿ ಮಾತನಾಡಿದ ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯ, ಮಠ–ಮಾನ್ಯಗಳು ಶಿಕ್ಷಣ ಮತ್ತು ಸಂಸ್ಕಾರ ಬೆಳೆಸುವ ಜೊತೆಗೆ ರಕ್ತದಾನದಲ್ಲಿ ತೊಡಗಿರುವುದು ಶ್ಲಾಘನೀಯ ಎಂದರು.

ರಕ್ತದಾನಕ್ಕೆ ಶಿಬಿರಗಳು ಇನ್ನು ಹೆಚ್ಚಾಗಿ ನಡೆಯಬೇಕು ಎಂದು ಹೇಳಿದ ಅವರು, ರಜನಿಕಾಂತ್ ಭಾರತ ಅಲ್ಲದೆ ಚೀನಾ, ಜಪಾನ್ ಸೇರಿದಂತೆ ಅನೇಕ ದೇಶಗಳಲ್ಲಿ ತನ್ನ ಅಭಿಮಾನಿಗಳನ್ನು ಹೊಂದಿದ್ದು, ರಜನಿ ಆರೋಗ್ಯ ಸ್ಥಿತಿ ಶೀಘ್ರ ಸುಧಾರಣೆಗೊಳ್ಳಲಿ ಎಂದು ಹಾರೈಸಿದರು.

ಸ್ವಯಂ ರಕ್ತದಾನ ಶಿಬಿರದಲ್ಲಿ 71 ಮಂದಿ ರಕ್ತದಾನ ಮಾಡಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

ಕಾರ್ಯಕ್ರಮದಲ್ಲಿ ಗೋಸಾಯಿ ಮಹಾಸಂಸ್ಥಾನ ಮಠ ಶ್ರೀ ಸುರೇಶ್ವರಾನಂದ ಭಾರತೀ ಸ್ವಾಮೀಜಿ, ರಜನಿಕಾಂತ್ ಸಹೋದರ ಸತ್ಯನಾರಾಯಣ್ ರಾವ್ ಸೇರಿದಂತೆ ಮರಾಠ ಪರಿಷತ್‌ನ ಪದಾಧಿಕಾರಿಗಳು ಭಾಗವಹಿಸಿದ್ದರು.

ವಿಜಯ ಕರ್ನಾಟಕ
ಬುಧವಾರ, 25 ಮೇ 2011, ಬೆಂಗಳೂರು 

# ಜನ ಧರ್ಮಪಾಲಕರಾಗಲಿ: ಸಲಹೆ

ಬೆಂಗಳೂರು: ಭ್ರಷ್ಟಾಚಾರ, ಲಂಚ ನಿರ್ಮೂಲನೆಗೆ ಜನರು ಲೋಕಪಾಲರಾದರೆ ಸಾಲದು, ಧರ್ಮ ಪಾಲಕರಾಗಬೇಕು. ಇದಕ್ಕೆ ಉತ್ತಮ ಶಿಕ್ಷಣ ಮತ್ತು ಸಂಸ್ಕಾರ ಮುಖ್ಯ ಎಂದು ರಾಜ್ಯಸಭೆ ಸದಸ್ಯ ಡಾ. ಎಂ.ರಾಮಾಜೋಯಿಸ್ ಅಭಿಪ್ರಾಯಪಟ್ಟರು.

ಭಾರತೀಯ ಎಂಜಿನಿಯರರ ಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ಸಂಸ್ಥಾಪನೆ ದಿನಾಚರಣೆ ಕಾರ್ಯಕ್ರಮ ಮಂಗಳವಾರ ಉದ್ಘಾಟಿಸಿ ಮಾತನಾಡಿ, ಕಾನೂನಿನಿಂದ ಭ್ರಷ್ಟಾಚಾರದ ಸಂಪೂರ್ಣ ನಿರ್ಮೂಲನೆ ಸಾಧ್ಯವಿಲ್ಲ ಎಂದರು.

ಇತ್ತೀಚೆಗೆ ಭ್ರಷ್ಟಾಚಾರ, ಲಂಚಗುಳಿತನ ಹೆಚ್ಚಾಗುತ್ತಿದೆ. ಮೈಸೂರಿನಲ್ಲಿ ಸುಮಾರು 500 ವರ್ಷ ರಾಜರು ರಾಜ್ಯಭಾರ ಮಾಡಿದರು. ಆಗ ಲಂಚದ ಪ್ರಶ್ನೆಯೇ ಇರಲಿಲ್ಲ. ರಾಜರು ಧರ್ಮನಿಷ್ಠರಾಗಿದ್ದರಿಂದ ಜನರೂ ಪ್ರಾಮಾಣಿಕರಾಗಿದ್ದರು. ಈಗ ಸಚಿವರು ಭ್ರಷ್ಟರಾಗುತ್ತಿದ್ದು ಜನರೂ ಅದೇ ಹಾದಿ ಹಿಡಿದಿದ್ದಾರೆ. ಸರಕಾರದ ದುಡ್ಡಿಗೂ, ನಮ್ಮ ಹಣಕ್ಕೂ ಭೇದವೇ ಇಲ್ಲದಂತಾಗಿದೆ ಎಂದರು.

ಮರಣದ ನಂತರವೂ ಅಮರರಾಗಿ ಉಳಿದವರಲ್ಲಿ ಸರ್ ಎಂ.ವಿಶ್ವೇಶ್ವರಯ್ಯ ಒಬ್ಬರು. ಎಂಜಿನಿಯರ್, ತಂತ್ರಜ್ಞಾನಿ ಹಾಗೂ ವಾಸ್ತುಶಿಲ್ಪಿಯ ಕೆಲಸ ಒಬ್ಬರೇ ಮಾಡಿ ಕನ್ನಂಬಾಡಿ ಜಲಾಶಯ ನಿರ್ಮಿಸಿದ್ದನ್ನು ಎಂದಿಗೂ ಮರೆಯಲಾಗುವುದಿಲ್ಲ ಎಂದು ಸ್ಮರಿಸಿದರು.

ಭಾರತೀಯ ಎಂಜಿನಿಯರರ ಸಂಸ್ಥೆಯ ಎಲ್ಲ ಮಾಜಿ ಅಧ್ಯಕ್ಷರನ್ನು ಸನ್ಮಾನಿಸಲಾಯಿತು. ಡಾ. ಕೆ.ಗೋಪಾಲಕೃಷ್ಣನ್, ಡಾ. ವೂಡೇ ಪಿ.ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.



ಭಾರತೀಯ ಎಂಜಿನಿಯರಿಂಗ್ ಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಡಾ. ಎಚ್.ಸಿ. ವಿಶ್ವೇಶ್ವರಯ್ಯ ಅವರನ್ನು ಡಾ. ಎಂ.ರಾಮಾ ಜೋಯಿಸ್ ಸನ್ಮಾನಿಸಿದರು.

ಕನ್ನಡಪ್ರಭ, ಭಾನುವಾರ, 8 ಮೇ 2011

ಪುಟ 3

## ಮಾಲಾರ್ಪಣೆ...



ಭಾರತ ಸೇವಾದಳ ಏರ್ಪಡಿಸಿದ್ದ ಡಾ.ನಾ.ಸು. ಹರ್ಡೀಕರ್ ಅವರ ಜನ್ಮದಿನೋತ್ಸವ ಅಂಗವಾಗಿ ಹರ್ಡೀಕರ್ ಪ್ರತಿಮೆಗೆ ಪದ್ಮಭೂಷಣ ಪ್ರಶಸ್ತಿ ಪುರಸ್ಕೃತ ಎಸ್.ಎನ್. ಸುಬ್ಬರಾವ್ ಮಾಲಾರ್ಪಣೆ ಮಾಡಿದರು. ಪ್ರೊಡೇ ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.

ಪ್ರಜಾವಾಣಿ

ಭಾನುವಾರ
8ನೇ ಮೇ 2011

3A B



## ಗೌರವ

ಪದ್ಮಭೂಷಣ ಡಾ. ನಾ.ಸು. ಹರ್ಡೀಕರ್ ಅವರ 122ನೇ ಜನ್ಮ ಜಯಂತಿ ಅಂಗವಾಗಿ ಶನಿವಾರ ಅವರ ಅನುಯಾಯಿ ಬಿ.ಸಿ. ವೆಂಕಟೇಶ್ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಅವರು ಹರ್ಡೀಕರ್ ಪ್ರತಿಮೆಗೆ ಮಾಲಾರ್ಪಣೆ ಮಾಡಿ ಗೌರವ ಸಲ್ಲಿಸಿದರು.

ಪ್ರಜಾವಾಣಿ ಭಾನುವಾರ 1 ಮೇ 2011



ಯೂತ್ ಹಾಸ್ಟೆಲ್ಸ್ ಅಸೋಸಿಯೇಷನ್ ಆಫ್ ಇಂಡಿಯಾ ಆಯೋಜಿಸಿದ್ದ ಕುಲುಮನಾಲಿ ಕಣಿವೆಯಲ್ಲಿ 23ನೇ ರಾಷ್ಟ್ರೀಯ ಹಿಮಾಲಯ ಕಾಲ್ನಡಿಗೆ ಸಾಹಸ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ಯುವಕರಿಗೆ ರೋಟರಿ ಗವರ್ನರ್ ಪಾಂಡುರಂಗ ಪೊಟ್ನಿಸ್ ಬೀಳ್ಕೊಟ್ಟರು. ಡಾ. ವೊಡೆ ಪಿ. ಕೃಷ್ಣ, ಸಿ.ಎನ್.ಎನ್. ರಾಜು, ರಮೇಶ್ ಬಾಬು ಹಾಗೂ ಇತರರು ಹಾಜರಿದ್ದರು

ಈ ಸಂಜೆ
ಶುಕ್ರವಾರ, 15 ಏಪ್ರಿಲ್, 2011



ದೀಪಾಂಜಲಿನಗರದ ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನಿಂದ ಬೆಂ.ವಿವಿ ಇತಿಹಾಸ ವಿಭಾಗದಲ್ಲಿ ಪಿಎಚ್.ಡಿ ಪಡೆದ ಡಾ.ಪುಟ್ಟರಾಜು ಅವರನ್ನು ಶಿಕ್ಷಣ ತಜ್ಞ ಡಾ.ವೂಡೆ.ಪಿ.ಕೃಷ್ಣ, ವಿಚಾರವಾದಿ ಡಾ.ಜಿ.ರಾಮಕೃಷ್ಣ, ಕವಿ ಸಿಸಿರಾ, ಚಿಂತಕ ಪಾನ್ನಂ ನಟರಾಜ್ ಅಭಿನಂದಿಸಿದರು.

ಈ ಸಂಜೆ
ಸೋಮವಾರ, 21 ಮಾರ್ಚ್, 2011



ಪುರುಷ ಹಾಗೂ ಮಹಿಳೆಯರ ಯೋಗ ಸ್ಪರ್ಧೆಯಲ್ಲಿ ಪ್ರಸಕ್ತ ಸಾಲಿನ ಪ್ರಶಸ್ತಿ ಪಡೆದ ಶೇಷಾದ್ರಿಪುರಂ ಕಾಲೇಜು ತಂಡದ ನಾಗರಾಜ್ ಭಟ್, ಲಕ್ಷ್ಮಿ, ಮಾನಸ, ಧನಲಕ್ಷ್ಮಿ, ಶೈಲಜಾ, ಜಿ.ಆರ್.ಮಾನಸ, ಶಶಿಕಿರಣ್ ವಿದ್ಯಾರ್ಥಿಗಳೊಂದಿಗೆ ದೈಹಿಕ ಶಿಕ್ಷಣ ಶಿಕ್ಷಕಿ ಸರಸ್ವತಿ, ಯೋಗ ತರಬೇತುದಾರ ಶ್ಯಾಮಸುಂದರ್, ಡಾ.ವೂಡೆ ಪಿ.ಕೃಷ್ಣ, ರಾಜನ್, ಡಾ.ಧನಪಾಲ್ ಇದ್ದಾರೆ.

ಪ್ರಜಾವಾಣಿ
ಬುಧವಾರ 25ನೇ ಮೇ 2011

# 'ಭ್ರಷ್ಟಾಚಾರ ತಡೆಗೆ ಜನರಲ್ಲೇ ಪರಿವರ್ತನೆ ಅಗತ್ಯ'

**ಪ್ರಜಾವಾಣಿ ವಾರ್ತೆ**

ಬೆಂಗಳೂರು: 'ಭ್ರಷ್ಟಾಚಾರದ ನಿಯಂತ್ರಣ ಕೇವಲ ಕಾನೂನಿನಿಂದ ಮಾತ್ರ ಸಾಧ್ಯವಿಲ್ಲ. ಬದಲಿಗೆ ಜನರ ಮನೋಭಾವದಲ್ಲೇ ಪರಿವರ್ತನೆಯಾಗಬೇಕು' ಎಂದು ರಾಜ್ಯಸಭಾ ಸದಸ್ಯ ಎಂ.ರಾಮಾ ಜೋಯಿಸ್ ಅಭಿಪ್ರಾಯಪಟ್ಟರು.

ನಗರದ ಅಂಬೇಡ್ಕರ್ ವೀದಿಯಲ್ಲಿರುವ ದಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಸಂಸ್ಥೆಯಲ್ಲಿ ಮಂಗಳವಾರ ನಡೆದ ಸಂಸ್ಥಾಪಕ ದಿನಾಚರಣೆ ಸಮಾರಂಭದಲ್ಲಿ ಅವರು ಮಾತನಾಡಿದರು.

'ದಿಢೀರ್ ಹಣ ಗಳಿಸುವ ಮನೋಭಾವ ಹೆಚ್ಚಾಗಿರುವುದರಿಂದ ಭ್ರಷ್ಟಾಚಾರ ಮೇರೆ ಮೀರುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಲೋಕಪಾಲ ಮಸೂದೆ ಜಾರಿಯಾದರಷ್ಟೇ ಸಾಲದು, ಜನರು ಕೂಡ ಧರ್ಮಪಾಲರಾಗಬೇಕು' ಎಂದರು.

'19ನೇ ಶತಮಾನದ ಶ್ರೇಷ್ಠ ವ್ಯಕ್ತಿ ಸರ್ ಎಂ.ವಿಶ್ವೇಶ್ವರಯ್ಯ ಅವರ ಆದರ್ಶ ಜೀವನ ಎಲ್ಲರಿಗೂ ಮಾದರಿ. ಅವರ ಕಾರ್ಯದಕ್ಷತೆ ಮತ್ತು ನಿಷ್ಠೆಯ ಬಗ್ಗೆ ಮಕ್ಕಳಲ್ಲಿ ಅರಿವು ಮೂಡಿಸಬೇಕು' ಎಂದರು.

'ಮಕ್ಕಳಿಗೆ ಶಿಕ್ಷಣದ ಜತೆಗೆ ಭ್ರಷ್ಟಾಚಾರವನ್ನು ವಿರೋಧಿಸುವ ಮನೋಭಾವ ಮೂಡಿಸಿದರೆ ಮುಂದಿನ ಕೆಲ ದಶಕಗಳಲ್ಲಿ ಇದು ನಿಯಂತ್ರಣಕ್ಕೆ ಬರಲಿದೆ. ಹಾಗೆಯೇ ಎಲ್ಲರೂ ಪ್ರಾಮಾಣಿಕತೆಯನ್ನು ರೂಢಿಸಿಕೊಂಡು ಜೀವನ ನಡೆಸಬೇಕು' ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಸಂಸ್ಥೆಯ ಮಾಜಿ ಅಧ್ಯಕ್ಷರು ಹಾಗೂ ಪದಾಧಿಕಾರಿಗಳನ್ನು ಅಭಿನಂದಿಸಲಾಯಿತು. ಸಂಸ್ಥೆಯ ಕರ್ನಾಟಕ ಶಾಖೆಯ ಅಧ್ಯಕ್ಷ ಡಾ.ಕೆ. ಗೋಪಾಲಕೃಷ್ಣ, ಮಂಡಳಿ ಸದಸ್ಯ ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

# ದೇಶಪ್ರೇಮಿಗಳನ್ನು ಸೃಷ್ಟಿಸುವ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ

ದೇಶವೊಂದು ಬಲಿಷ್ಠವಾಗಿ ರೂಪುಗೊಳ್ಳಬೇಕಾದರೆ ಅದಕ್ಕೆ ಶಿಕ್ಷಣ ಎಂಬುದು ಪ್ರಮುಖ ಪಾತ್ರ ವಹಿಸುತ್ತದೆ. ಇದಕ್ಕೆ ಶಿಕ್ಷಣ ಸಂಸ್ಥೆಗಳು ಉತ್ತಮ ಶಿಕ್ಷಣ ನೀಡಿ ಸತ್ಪ್ರಜೆಗಳನ್ನು ರೂಪಿಸುವ ಹೊಣೆ



ಹೊರಬೇಕು. ಇಂತಹ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಹಿರಿಯರ ಕನಸಿನ ಕೂಸಾಗಿ ಬಹು

ನ್ನಾಗಿ ಮಾಡಬೇಕೆಂಬ ಸರ್ಕಾರದ ಕಲ್ಪನೆಗೆ ಬೆಂಬಲವಾಗಿ ಅನೇಕ ಖಾಸಗಿ ಶಿಕ್ಷಣ ಸಂಸ್ಥೆಗಳು ತಮ್ಮ ಸಹಕಾರವನ್ನು ನೀಡುತ್ತಿವೆ. ಇವುಗಳಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ನಿಜವಾದ ಅರ್ಥದಲ್ಲಿ ದೇಶಪ್ರೇಮ ಮೂಡುವಂತಹ ಹಾಗೂ ದೇಶದ ಪ್ರಗತಿಗೆ ಅನುಕೂಲವಾಗುವಂತಹ ಶಿಕ್ಷಣ ನೀಡುತ್ತಿದೆ.

ದೇಶಪ್ರೇಮವಿರುವ ಪ್ರಜೆಗಳನ್ನು

**ಸಾವಿರಾರು ಮಂದಿಗೆ ಶಿಕ್ಷಣ ನೀಡಬೇಕೆಂದು ಹಿರಿಯ ಚೇತನಗಳ ಕನಸಿನ ಕೂಸಾಗಿ ಜನ್ಮ ತಳೆದ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಇಂದು ಬೆಂಗಳೂರಿನ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳ ಸಾಲಿಗೆ ಸೇರಿದೆ. ಇದಕ್ಕೆ ಹಲವಾರು ಮಂದಿಯ ಶ್ರಮ ಇದೆ ಎಂದರೆ ತಪ್ಪಲ್ಲ.**

ರೂಪಿಸಬೇಕು ಎಂದು ಹಿರಿಯರು ಕಟ್ಟಿದ ಶಿಕ್ಷಣ ಸಂಸ್ಥೆಯ ಆಶಯಗಳಿಗೆ ಅನೇಕರು ನೀರೆರೆದು ಪೋಷಿಸಿದ್ದಾರೆ. ನಿಜ. ಆದರೆ, ಈಗಿನ ಮಟ್ಟಿಗೆ ನೋಡಿದರೆ ಹಣವೇ ಪ್ರಧಾನ ಪಾತ್ರ ವಹಿಸುತ್ತಿದೆ. ಇಂತಹ

### ಅಪ್ಪಟ ದೇಶ ಪ್ರೇಮಿ

ವೂಡೆ ಪಿ. ಕೃಷ್ಣ ಅಪ್ಪಟ ದೇಶಪ್ರೇಮಿ. ಅಲ್ಲದೆ ಸ್ವತಃ ರಕ್ತದಾನಿ. ಅವಘಡದಲ್ಲಿ ಗಾಯಗೊಂಡು ರಕ್ತದ ಅವಶ್ಯಕತೆಗಾಗಿ ನೊಂದವರ ಬಗ್ಗೆ ತಿಳಿದುಕೊಂಡು ತಾವೇ ನಿಯಮಿತವಾಗಿ ರಕ್ತದಾನ ಮಾಡುವ ಮೂಲಕ ಇತರರಿಗೆ ಮಾದರಿಯಾಗಿದ್ದಾರಲ್ಲದೆ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲೂ ನಿಯಮಿತವಾಗಿ ರಕ್ತದಾನ ಶಿಬಿರಗಳನ್ನು ಆಯೋಜಿಸುವ ಮೂಲಕ ವಿದ್ಯಾರ್ಥಿಗಳಲ್ಲಿ ರಕ್ತದಾನದ ಮಹತ್ವವನ್ನು ತಿಳಿಯಪಡಿಸುತ್ತಿದ್ದಾರೆ.

ಹಿಂದೆ ಜನ್ಮ ತಳೆದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸೇರುತ್ತದೆ.

ಎಲ್ಲರಿಗೂ ಶಿಕ್ಷಣ ನೀಡಿ ಸಾಕ್ಷರರ

ಸಂದರ್ಭದಲ್ಲೂ ವಿದ್ಯಾರ್ಥಿಗಳು, ಪೋಷಕರನ್ನು ಇಕ್ಕಟ್ಟಿಗೆ ಸಿಲುಕಿಸದೆ ಅತಿ ಕಡಿಮೆ ಶುಲ್ಕದಲ್ಲಿ ಶಿಕ್ಷಣ ನೀಡುವ

ಮೂಲಕ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ. ಇದಕ್ಕೆ ಚಿಕ್ಕ ವಯಸ್ಸಿನಲ್ಲೇ ಸರಳತೆ ರೂಢಿಸಿಕೊಂಡಿರುವ ವೂಡೇ ಪಿ. ಕೃಷ್ಣರವರ ಯೋಚನೆಯ ಫಲ ಎಂದರೆ ತಪ್ಪಾಗಲಾರದು.

ವಿದ್ಯೆ ಕಲಿಯಲು ಬರುವ ವಿದ್ಯಾರ್ಥಿಗಳಿಗೆ ಶಿಕ್ಷಣ ಸಂಸ್ಥೆಗಳು ಅವರಿಗೆ ಜ್ಞಾನವನ್ನು ತುಂಬುವ ಕೆಲಸ ಮಾಡಬೇಕು. ವ್ಯಾಪಾರಿ ಬುದ್ಧಿಯನ್ನು ಬಿಡಬೇಕು. ಆಗ ಮಾತ್ರವೇ ಶಿಕ್ಷಣಕ್ಕೆ ಒಂದು ಬೆಲೆ ಬರುತ್ತದೆ. ಇಲ್ಲವಾದರೆ ಶಿಕ್ಷಣ ಕೂಡಾ ಹಣಕ್ಕೆ ಮಾರಿಕೊಳ್ಳುವ ವಸ್ತುವಾಗಿ ಬಿಡುತ್ತದೆ. ಇದನ್ನು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರುವ ಪ್ರತಿಯೊಬ್ಬರೂ ಯೋಚಿಸಬೇಕು ಎನ್ನುತ್ತಾರೆ ವೂಡೇ ಪಿ. ಕೃಷ್ಣ.

ನುಡಿದಂತೆ ನಡೆಯುವ ಮೂಲಕ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಎಂದಿಗೂ ವಿದ್ಯಾರ್ಥಿಗಳಿಂದ ಡೊನೇಷನ್ ರೂಪದಲ್ಲಿ ಸುಲಿಗೆಗೆ ಕೈಹಾಕಿಲ್ಲ. ಶಿಕ್ಷಣ ನೀಡಲು ಎಷ್ಟು ಅವಶ್ಯಕತೆಯೋ ಅಷ್ಟನ್ನು ಮಾತ್ರ ವಸೂಲಿ ಮಾಡುವ ಮೂಲಕ ಇತರ ಸಂಸ್ಥೆಗಳಿಗೆ ಮಾದರಿಯಾಗಿದ್ದಾರೆ.

ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ




## ಖಾದಿ ವಸ್ತು ಪ್ರದರ್ಶನ

ಹಿರಿಯ ಗಾಂಧಿವಾದಿ ಹಾಗೂ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಶೇಷಾದ್ರಿಪುರಂ ಕಾಲೇಜು ಗಾಂಧಿ ಅಧ್ಯಯನ ಕೇಂದ್ರ ಆಯೋಜಿಸಿದ್ದ ಖಾದಿವಸ್ತು ಪ್ರದರ್ಶನವನ್ನು ಉದ್ಘಾಟಿಸಿದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಪ್ರೊ. ಎಚ್. ಆರ್. ದಾಸೇಗೌಡ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ, ಡಾ. ವೂಡೆ ಪಿ. ಕೃಷ್ಣ, ಪ್ರಾಂಶುಪಾಲ ಪ್ರೊ. ಎಂ.ಡಿ. ರಾಜನ್ ಹಾಗೂ ಪ್ರೊ. ಪ್ರತಾಪ್ ಲಿಂಗಯ್ಯ ಉಪಸ್ಥಿತರಿದ್ದರು.

ಪ್ರಜಾವಾಣಿ

ಗುರುವಾರ 10 ಮಾರ್ಚ್ 2011



## ಪುಷ್ಪ ನಮನ

ಶೇಷಾದ್ರಿಪುರ ಕಾಲೇಜಿನಲ್ಲಿ ಮಂಗಳವಾರ ಆಯೋಜಿಸಲಾಗಿದ್ದ ಖಾದಿ ವಸ್ತು ಪ್ರದರ್ಶನ ಉದ್ಘಾಟಿಸಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಗಾಂಧೀಜಿ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು. ಪ್ರೊ. ಎಚ್.ಆರ್. ದಾಸೇಗೌಡ, ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಪ್ರಾಚಾರ್ಯ ಪ್ರೊ. ಎಂ.ಡಿ. ರಾಜನ್, ಸಂಚಾಲಕ ಪ್ರೊ. ಪ್ರತಾಪ್ ಲಿಂಗಯ್ಯ ಚಿತ್ರದಲ್ಲಿದ್ದಾರೆ.

ಕನ್ನಡಪ್ರಭ, ಗುರುವಾರ, 10 ಮಾರ್ಚ್ 2011



**ಉದ್ಘಾಟನೆ...**

ಶೇಷಾದ್ರಿಪುರಂ ವಾಣಿಜ್ಯ ಕಾಲೇಜು ಏರ್ಪಡಿಸಿದ್ದ ಅಂತರ ಕಾಲೇಜು ಸಾಂಸ್ಕೃತಿಕ ಸಮಾರಂಭದ ಉದ್ಘಾಟನೆಯಲ್ಲಿ ಪ್ರೊ. ಶ್ರೀಕಂಠಯ್ಯ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ [illegible] ಎನ್. ಆರ್. ಪಂಡಿತಾರಾಧ್ಯ, ಚಿಕ್ಕಣ್ಣ, ಶಶಿಧರ್ ಕೋಟೆ ಇದ್ದರು.

ಪ್ರಜಾವಾಣಿ

ಗುರುವಾರ 10ನೇ ಮಾರ್ಚ್ 2011

# ಮೌಲ್ಯಗಳನ್ನು ಬೆಳೆಸುವುದು ಎನ್‌ಎಸ್‌ಎಸ್ ಉದ್ದೇಶ

ಪ್ರಜಾವಾಣಿ ವಾರ್ತೆ

ದೊಡ್ಡಬಳ್ಳಾಪುರ: ಯುವ ಸಮುದಾಯದಲ್ಲಿ ಆದರ್ಶಗಳು ಮತ್ತು ಮೌಲ್ಯಗಳನ್ನು ಬೆಳೆಸುವುದು ರಾಷ್ಟ್ರೀಯ ಸೇವಾ ಯೋಜನೆ ಶಿಬಿರಗಳ ಉದ್ದೇಶವಾಗಿದೆ ಎಂದು ಬಿಂದು ಪ್ರೌಢಶಾಲೆ ಮುಖ್ಯಶಿಕ್ಷಕ ಸಿ.ಎನ್.ಅನಂತರಾಜಯ್ಯ ಹೇಳಿದರು.

ತಾಲ್ಲೂಕಿನ ಕಂಟನಕುಂಟೆ ಗ್ರಾಮದಲ್ಲಿ ಬೆಂಗಳೂರಿನ ಶೇಷಾದ್ರಿಪುರಂ ಕಾಮರ್ಸ್ ಕಾಲೇಜು ಹಮ್ಮಿಕೊಂಡಿರುವ ವಿಶೇಷ ವಾರ್ಷಿಕ ಶಿಬಿರ ಉದ್ಘಾಟಿಸಿ ಮಾತನಾಡಿದರು.

ಯುವ ಜನಾಂಗದಲ್ಲಿ ರಾಷ್ಟ್ರ ಪ್ರೇಮ ಬೆಳೆಸುವ ದೃಷ್ಟಿಯಿಂದ ಗಾಂಧಿಜಿಯವರು ಸ್ಥಾಪಿಸಿದ ರಾಷ್ಟ್ರೀಯ ಸೇವಾ ಯೋಜನಾ ಘಟಕಗಳು ದೇಶದ ಬಹುತೇಕ ಕಾಲೇಜುಗಳಲ್ಲಿ ಜಾರಿಯಲ್ಲಿವೆ. ಗ್ರಾಮೀಣ ಜನರ ಬದುಕು ಸುಧಾರಣೆಯಾಗದೆ ದೇಶದ ಪ್ರಗತಿ ಸಾಧ್ಯವಿಲ್ಲ ಎಂದು ಹೇಳಿದರು.

ಸಮಾರಂಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಅಧ್ಯಕ್ಷ ಎಸ್.ಶೇಷನಾರಾಯಣ, ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಪ್ರಾಂಶುಪಾಲರಾದ ಜಯಶ್ರೀ ಜೆ.ಸಿಂಗ್, ಗ್ರಾ.ಪಂ.ಸದಸ್ಯ ಕೆ.ಆರ್.ಶೇಷರಂಗಯ್ಯ, ಕಂಟನಕುಂಟೆ ಎಂಪಿಸಿಎಸ್ ಕಾರ್ಯದರ್ಶಿ ರಮೇಶ್ ಶಣೈ ಇತರರು ಹಾಜರಿದ್ದರು.



ದೊಡ್ಡಬಳ್ಳಾಪುರ ತಾಲ್ಲೂಕಿನ ಕಂಟನಕುಂಟೆ ಗ್ರಾಮದಲ್ಲಿ ಎನ್‌ಎಸ್‌ಎಸ್ ವಿಶೇಷ ವಾರ್ಷಿಕ ಶಿಬಿರವನ್ನು ಬಿಂದು ಪ್ರೌಢ ಶಾಲೆ ಮುಖ್ಯಶಿಕ್ಷಕ ಸಿ.ಎನ್.ಅನಂತರಾಜಯ್ಯ ಉದ್ಘಾಟಿಸಿದರು. ಸಂಸ್ಥೆ ಅಧ್ಯಕ್ಷ ಎಸ್.ಶೇಷನಾರಾಯಣ, ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮುಂತಾದವರು ಹಾಜರಿದ್ದರು.



# ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಂತರ್ ವಿದ್ಯಾಸಂಸ್ಥೆಗಳ ಕ್ರೀಡಾಕೂಟ



ವರದಿ : ಆರ್. ಚಿಕ್ಕರಂಗಸ್ವಾಮಿ

ಇತ್ತೀಚೆಗೆ ಬೆಂಗಳೂರಿನ ಶೇಷಾದ್ರಿಪುರಂ ವಿದ್ಯಾಸಂಸ್ಥೆಯ ಕಾಮರ್ಸ್ ಮತ್ತು ಮ್ಯಾನೇಜ್‌ಮೆಂಟ್ ಕಾಲೇಜ್‌ನವತಿಯಿಂದ ಪವರ್ ಲಿಫ್ಟಿಂಗ್ ಮತ್ತು ಬ್ಯಾಡ್ಮಿಂಟನ್ ಕ್ರೀಡೆಗಳನ್ನು ಆಯೋಜಿಸಿತ್ತು. ಅಂತರ್ ವಿದ್ಯಾಸಂಸ್ಥೆಗಳಾದ ಯಲಹಂಕ, ಮಾಗಡಿರಸ್ತೆ, ಮತ್ತು ಶೇಷಾದ್ರಿಪುರಂ ಮೈನ್ ಕಾಲೇಜು ಈ ಕ್ರೀಡಾಕೂಟದಲ್ಲಿ ಭಾಗವಹಿಸಿದ್ದವು. ಕ್ರೀಡಾಕೂಟದ ಉದ್ಘಾಟನೆಯನ್ನು ಶೇಷಾದ್ರಿಪುರಂ ಶಿಕ್ಷಣದತ್ತಿಯ ಕಾರ್ಯಕಾರಿ ಸಮಿತಿಯ ಮುಖ್ಯಸ್ಥರು 'ಜ್ಯೋತಿ' ಬೆಳಗಿಸುವ ಮೂಲಕ ಚಾಲನೆ ನೀಡಿದರು.

ಕ್ರೀಡಾಕೂಟದಲ್ಲಿ ವಿಜೇತರಾದ ಕ್ರೀಡಾಪಟುಗಳ ಸಂಕ್ಷಿಪ್ತ ವಿವರಣೆ. ಬಾಲಕರ ಬ್ಯಾಡ್ಮಿಂಟನ್‌ನಲ್ಲಿ ಪ್ರಥಮ ಬಹುಮಾನವು ಶೇಷಾದ್ರಿಪುರಂ ಪದವಿ ಕಾಲೇಜ್(ಮುಖ್ಯ), ಶೇಷಾದ್ರಿಪುರಂ ತಂಡಕ್ಕೆ ಲಭಿಸಿದೆ (ತಂಡದಲ್ಲಿ ಚಂದನ್, ಜಯಂತ್ ಪಿ.ಎಂ., ಪ್ರದೀಪ್ ಎಸ್. ಶ್ರೀನಿಧಿ ಡಿ.ಹೆಚ್., ನವೀನ್ ಕುಮಾರ್ ಟಿ.ಎನ್.)



ದ್ವಿತೀಯ ಬಹುಮಾನವನ್ನು ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು, ಯಲಹಂಕ ಗಳಿಸಿದೆ. ಈ ತಂಡದಲ್ಲಿ ರಾಜೇಶ್.ಎನ್, ಸತ್ಯ ಎನ್. ಭಟ್, ವಿನೋದ್ ಕುಮಾರ್, ಸಜಿತೀತ್ ಬಿ. ಸ್ಪರ್ಧಿಗಳಾಗಿದ್ದರು.

ಬಾಲಕಿಯರ ಬ್ಯಾಡ್ಮಿಂಟನ್‌ನಲ್ಲಿ ಪ್ರಥಮ ಬಹುಮಾನವು ಶೇಷಾದ್ರಿಪುರಂ ಪದವಿ ಕಾಲೇಜ್(ಮುಖ್ಯ), ಶೇಷಾದ್ರಿಪುರಂ ತಂಡಕ್ಕೆ ಲಭಿಸಿದೆ (ತಂಡದಲ್ಲಿ ಎನ್. ಶೃತಿ, ಎನ್. ಶುಭ, ಬಿ. ಅನಾಘ, ಶರಣ್ಯ, ಎಸ್.ಪಿ. ಶೃತಿ ಸ್ಪರ್ಧಿಗಳಾಗಿದ್ದರು.)

ದ್ವಿತೀಯ ಬಹುಮಾನವನ್ನು ಶೇಷಾದ್ರಿಪುರಂ ಕಾಮರ್ಸ್ ಕಾಲೇಜು, ಮಾಗಡಿ ಗಳಿಸಿದೆ. (ತಂಡದಲ್ಲಿ ಪಿ. ಪವಿತ್ರ, ಎಸ್.ಎ. ಸೌಮ್ಯ, ವರಿಣಿ ರಘುರಾಮ್, ಹೆಚ್. ಐಶ್ವರ್ಯ, ಸ್ವಾತಿ ಪುರುಷೋತ್ತಮ್ ಸ್ಪರ್ಧಿಗಳಾಗಿದ್ದರು)

ಪವರ್ ಲಿಫ್ಟಿಂಗ್‌ನಲ್ಲಿ ವಿಜೇತರ ವಿವರಗಳನ್ನು (ಪಕ್ಕದ) ಪಟ್ಟಿಯಲ್ಲಿ ಪ್ರಕಟಿಸಲಾಗಿದೆ. ಕ್ರೀಡಾಕೂಟದಲ್ಲಿ ಚಾಂಪಿಯನ್ ಷಿಪ್‌ನ್ನು 36 ಅಂಕಗಳೊದಿಗೆ ನಾಲ್ಕು ಚಿನ್ನ, ನಾಲ್ಕು ಬೆಳ್ಳಿ, ಎರಡು ಕಂಚಿನ ಪದಕಗಳನ್ನು ಪಡೆದು ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಮತ್ತು ಮ್ಯಾನೇಜ್‌ಮೆಂಟ್ ಗೆದ್ದುಕೊಂಡಿದೆ.

ಕ್ರೀಡಾಕೂಟದ ಪವರ್ ಲಿಫ್ಟಿಂಗ್‌ನ 56 ಕೆ.ಜಿ. ವಿಭಾಗದಲ್ಲಿ ಹರೀಶ್ ವೈ.ಎಸ್. ರವರು 140ಕೆ.ಜಿ. ತೂಕದ ಲಿಫ್ಟಿಂಗ್ ಮಾಡುವ ಮೂಲಕ 'ಶಕ್ತಿಶಾಲಿ' ಎಂದು ಗುರುತಿಸಿಕೊಂಡಿದ್ದಾರೆ.

ಸಂಸ್ಥೆಯಿಂದ ಆಯೋಜಿಸಲಾಗಿದ್ದ ಪವರ್ ಲಿಫ್ಟಿಂಗ್ ಮತ್ತು ಬ್ಯಾಡ್ಮಿಂಟನ್ ಕ್ರೀಡಾ ಕೂಟಗಳಲ್ಲಿ ಶೇಷಾದ್ರಿಪುರಂ ಶಿಕ್ಷಣದತ್ತಿಯ ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಕ್ರೀಡಾಸಕ್ತಿಯನ್ನು ಪ್ರದರ್ಶಿಸಿದರು.

**ಪವರ್ ಲಿಫ್ಟಿಂಗ್‌ನಲ್ಲಿ ವಿಜೇತರಾದ ವಿದ್ಯಾರ್ಥಿಗಳ ಪಟ್ಟಿ**

| Category | Position | Students Name | College | Heat Lifted |
|---|---|---|---|---|
| 56 kgs | 01 | Harish Y S. | Seshadripuram Institute of Commerce & Management | 140 kgs. |
| | 02 | Soma Nayak | Seshadripuram Evening Degree College | 135 kgs. |
| | 03 | Chandru S. | Seshadripuram Evening Degree College | 115 kgs |
| 60 kgs. | 01 | [illegible] | Seshadripuram Institute of Commerce & Management | 130 kgs |
| | 02 | Karthik N. | Seshadripuram Institute of Commerce & Management | 130 kgs |
| | 03 | Guru H.R. | Seshadripuram Commerce College | 130 kgs |
| 67.5 kgs. | 01 | Kiran Kumar N. | Seshadripuram Institute of Commerce & Management | 170 kgs. |
| | 02 | Santhosh S. | Seshadripuram Institute of Commerce & Management | 165 kgs. |
| | 03 | Santosh D.R. | Seshadripuram First Grade College, Yelahanka | 160 kgs. |
| 75 kgs. | 01 | Chethan Kumar G.R. | Seshadripuram Academy of Business Studies | 180 kgs. |
| | 02 | Madhu B.K. | Seshadripuram Academy of Business Studies | 170 Kgs. |
| | 03 | Kiran Kumar P. | Seshadripuram Institute of Commerce & Management | 160 Kgs. |
| 82.5 kgs. | 01 | Kiran Kumar H. | Seshadripuram Degree college, Main | 185 Kgs. |
| | 02 | Hari Babu | Seshadripuram Degree college, Evening | 155kgs. |
| | 03 | Sunil Kumar.S | Seshadripuram Degree college, Evening | 152.5kgs |
| 90 kgs. | 01 | Bhaskar S. | Seshadripuram P.U college, Main | 172.5kgs |
| | 02 | Suraj.S.Pawar | Seshadripuram Institute of Commerce & Management | 155kgs |
| | 03 | Anil Kumar J.K | Seshadripuram composite P.U college | [illegible] |
| 100 kgs | 01 | Santhosh N. | Seshadripuram Degree college, Main | [illegible] |
| | 02 | Ashwin C. | Seshadripuram Institute of Commerce & Management | 165kgs |
| | 03 | Karthik M.N. | Seshadripuram Institute of Commerce & Management | [illegible] |
| 110 kgs. | 01 | Vinod S | Seshadripuram Institute of Commerce & Management | 170kgs. |
| | 02 | Neeraj Tiwari | Seshadripuram P.U college, Main | 150kgs. |
| | 03 | Vinod Kumar | Seshadripuram P.U college, Main | 140kgs. |
| 125 kgs. | 01 | Nanda Kumar | Seshadripuram Degree college, Evening | 140kgs. |

ಈ ಸಂಜೆ

ಮಂಗಳವಾರ, 15 ಫೆಬ್ರವರಿ, 2011



ಶೇಷಾದ್ರಿಪುರಂ ಕಾಲೇಜಿನ ಎನ್‌ಎಸ್‌ಎಸ್, ಎನ್‌ಸಿಸಿ, ಯೂತ್ ರೆಡ್‌ಕ್ರಾಸ್ ಸಹಯೋಗದೊಂದಿಗೆ ಆಯೋಜಿಸಿದ್ದ ರಕ್ತದಾನ ಶಿಬಿರಕ್ಕೆ ನಟ ಶ್ರೀಕಾಂತ್ ಹಾಗೂ ನಿರ್ದೇಶಕ ಜಯತೀರ್ಥ ಚಾಲನೆ ನೀಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಪ್ರೊ. ಎಂ.ಡಿ. ರಾಜನ್, ಪ್ರೊ. ಪ್ರತಾಪ್ ಲಿಂಗಯ್ಯ, ಮೇಜರ್ ಮೋಹನ್ ಕುಮಾರ್, ಪ್ರೊ. ಎಸ್. ಲತಾ ಹಾಗೂ ಮತ್ತಿತರರು ಪಾಲ್ಗೊಂಡಿದ್ದರು.

ಉದಯವಾಣಿ

ಮಂಗಳವಾರ | ಫೆಬ್ರವರಿ | 15 | 2011

## ರಕ್ತದಾನ ಶಿಬಿರ

ಶೇಷಾದ್ರಿಪುರಂ ಕಾಲೇಜು ಯೂತ್ ರೆಡ್‌ಕ್ರಾಸ್ ಏರ್ಪಡಿಸಿದ್ದ ರಕ್ತದಾನ ಶಿಬಿರಕ್ಕೆ ನಟ ಶ್ರೀಕಾಂತ್ ಹಾಗೂ ನಿರ್ದೇಶಕ ಜಯತೀರ್ಥ ಚಾಲನೆ ನೀಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಡಾ. ಎಂ.ಡಿ. ರಾಜನ್, ಪ್ರೊ. ಪ್ರತಾಪ್ ಲಿಂಗಯ್ಯ, ಮೋಹನ್‌ಕುಮಾರ್, ಪ್ರೊ. ಎನ್. ಲತಾ ಮತ್ತಿತರರು ಉಪಸ್ಥಿತರಿದ್ದರು.



ಪ್ರಜಾವಾಣಿ ಸೋಮವಾರ 14ನೇ ಫೆಬ್ರುವರಿ 2011



ಬೆಂಗಳೂರು ಈಡಿಗರ ವಿದ್ಯಾರ್ಥಿ ನಿಲಯದ ಹಳೆಯ ವಿದ್ಯಾರ್ಥಿಗಳ ಸಂಘದಿಂದ ಭಾನುವಾರ ಬೆಂಗಳೂರಿನಲ್ಲಿ ನಡೆದ ವಿದ್ಯಾರ್ಥಿವೇತನ ಹಾಗೂ ಚಿನ್ನದ ಪದಕಗಳ ವಿತರಣಾ ಸಮಾರಂಭದಲ್ಲಿ ಪದಕ ಪಡೆದ ವಿದ್ಯಾರ್ಥಿಗಳಾದ ಎಸ್.ಮೇಘನಾ, ಎನ್.ಮಮತಾಲಕ್ಷ್ಮಿ, ಆರ್.ಪವಿತ್ರ, ವೈ.ಅಭಿಷೇಕ್ ಅವರೊಂದಿಗೆ ಮಾಜಿ ಸಚಿವ ಪಿ.ಜಿ.ಆರ್.ಸಿಂಧ್ಯ, ವೂಡೆ ಪಿ.ಕೃಷ್ಣ, ಪ್ರೊ.ಜಿ.ವಿ.ದಾಸೇಗೌಡ ಹಾಗೂ ಇತರರು. –ಪ್ರಜಾವಾಣಿ ಚಿತ್ರ

### ಈಡಿಗ ವಿದ್ಯಾರ್ಥಿಗಳಿಗೆ ಪದಕ ಪ್ರದಾನ ಸಮಾರಂಭ

# ಚಿನ್ನದ ಬಾಲೆಯರು– ಸಿಂಧ್ಯ ಹರ್ಷ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡದ ಹೊರತು ದೇಶ ಉದ್ಧಾರ ಆಗುವುದಿಲ್ಲ. ಯಾವುದೇ ಜನಾಂಗದ ಅಭಿವೃದ್ಧಿಯಾಗಬೇಕಾದರೆ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಲೇಬೇಕು ಎಂದು ಜೆಡಿಎಸ್ ಕಾರ್ಯಾಧ್ಯಕ್ಷ ಪಿ.ಜಿ.ಆರ್. ಸಿಂಧ್ಯ ಇಲ್ಲಿ ಹೇಳಿದರು.

ಬೆಂಗಳೂರು ಈಡಿಗರ ವಿದ್ಯಾರ್ಥಿ ನಿಲಯದ ಹಳೆಯ ವಿದ್ಯಾರ್ಥಿಗಳ ಸಂಘದಿಂದ ಭಾನುವಾರ ನಗರದಲ್ಲಿ ಹಮ್ಮಿಕೊಳ್ಳಲಾಗಿದ್ದ ವಿದ್ಯಾರ್ಥಿವೇತನ ಹಾಗೂ ಚಿನ್ನದ ಪದಕಗಳ ವಿತರಣಾ ಸಮಾರಂಭದಲ್ಲಿ ಅವರು ಮಾತನಾಡಿದರು.

ಈ ಸಮಾರಂಭದಲ್ಲಿ ವಿದ್ಯಾರ್ಥಿನಿಯರೇ ಹೆಚ್ಚಿನ ಸಂಖ್ಯೆಯಲ್ಲಿ ಚಿನ್ನದ ಪದಕ ಪಡೆದ ಬಗ್ಗೆ ಅತೀವ ಶ್ಲಾಘನೆ ವ್ಯಕ್ತಪಡಿಸಿದ ಅವರು, ಹೆಣ್ಣಿಗೆ ಶಿಕ್ಷಣ ಸಿಕ್ಕರೆ ಆಕೆ ಏನನ್ನಾದರೂ ಸಾಧಿಸಿಯಾಳು ಎಂದರು.

ಇದೇ ಸಂದರ್ಭದಲ್ಲಿ ತಮ್ಮ ತಾಯಿ ಸರಸ್ವತಿ ಅವರನ್ನು ಸ್ಮರಿಸಿದ ಸಿಂಧ್ಯ ಅವರು, ಅವಿದ್ಯಾವಂತೆಯಾಗಿರುವ ತಮ್ಮ ತಾಯಿ ಯಾವ ರೀತಿ ಕಷ್ಟಪಟ್ಟು ಈ ಸ್ಥಾನಕ್ಕೆ ತಮ್ಮನ್ನು ಏರಿಸಿದರು ಎಂಬ ಬಗ್ಗೆ ಭಾವುಕರಾಗಿ ನುಡಿದರು.

ಈಡಿಗ ಸಮುದಾಯದ ರಾಜಕೀಯ ಮುಖಂಡರ ಬಗ್ಗೆ ಶ್ಲಾಘನೆ ವ್ಯಕ್ತಪಡಿಸುತ್ತ, 'ರಾಜಕೀಯದಲ್ಲಿ ಧುಮುಕಿರುವ ಈಡಿಗ ಸಮುದಾಯ ಗಣ್ಯರು ಜಾತ್ಯತೀತರಾಗಿ ರಾಜ್ಯದ ಪ್ರಗತಿಗೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ಆದರೆ ರಾಜಕೀಯದಲ್ಲಿನ ಏರುಪೇರುಗಳಿಂದ ಅವರಿಗೆ ಸಿಗಬೇಕಾದ ನ್ಯಾಯ ಸಮ್ಮತ ಹಕ್ಕು ಸಿಕ್ಕಿಲ್ಲ' ಎಂದು ವಿಷಾದಿಸಿದರು.

ಬಹುತೇಕ ರಾಜಕಾರಣಿಗಳು ಅಥವಾ ಇನ್ನಾವುದೇ ಕ್ಷೇತ್ರದ ಮುಖಂಡರು ತಮ್ಮದೇ ಜಾತಿ–ಜನಾಂಗದ ಏಳಿಗೆಗಾಗಿ ದುಡಿಯುತ್ತಾರೆ. ಆದರೆ ಬಂಗಾರಪ್ಪ, ಜಾಲಪ್ಪ, ಜನಾರ್ದನ ಪೂಜಾರಿ ಮುಂತಾದ ಮುಖಂಡರು ತಮ್ಮ ಅಧಿಕಾರಾವಧಿಯಲ್ಲಿ ಕೇವಲ ಜನಾಂಗಕ್ಕೆ ಸೀಮಿತಗೊಳ್ಳದೆ, ಎಲ್ಲರಿಗೂ ಅನುಕೂಲ ಆಗುವ ಕಾರ್ಯಕ್ರಮ ರೂಪಿಸಿರುತ್ತಾರೆ ಎಂದರು.

ಬೃಹತ್ ಸಂಖ್ಯೆಯ ಈಡಿಗ ಸಮುದಾಯವರಲ್ಲಿ ಐಎಎಸ್ ಅಥವಾ ಕೆಎಎಸ್‌ನಂತರ ಉನ್ನತ ಸ್ಥಾನವನ್ನು ಏರಿರುವವರು ಬಹಳ ವಿರಳ. ಅಧಿಕಾರ ಎಂದರೆ ಬರಿಯ ವಿಧಾನಸೌಧದಲ್ಲಿನ ಮಂತ್ರಿಗಿರಿ ಅಲ್ಲ. ಬೇರೆ ಕ್ಷೇತ್ರದಲ್ಲಿಯೂ ಜನಾಂಗದವರು ಮುಂದೆ ಬರಬೇಕಾದ ಅಗತ್ಯ ಇದೆ ಎಂದರು. ಅಂತೆಯೇ 'ಪ್ರಜಾವಾಣಿ' ಹಾಗೂ 'ಡೆಕ್ಕನ್ ಹೆರಾಲ್ಡ್' ಪತ್ರಿಕೆಗಳು ಜನಾಂಗಕ್ಕೆ ದೊಡ್ಡ ಕೊಡುಗೆ ನೀಡಿವೆ! ಕೋಟ್ಯಂತರ ಜನತೆಯ ಹೃದಯಗೆದ್ದಿರುವ ಪತ್ರಿಕೆಗಳು ವಿದೇಶದಲ್ಲಿಯೂ ಛಾಪು ಮೂಡಿಸಿವೆ ಎಂದು ಶ್ಲಾಘಿಸಿದರು.

ಸರ್ಕಾರದಿಂದಲೇ ನಿರೀಕ್ಷಿಸಬೇಡಿ: ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮಾತನಾಡಿ, ಎಲ್ಲ ಸೌಲಭ್ಯಗಳನ್ನು ಸರ್ಕಾರವೇ ಒದಗಿಸಬೇಕು ಎಂದು ಆಶಿಸುವುದು ಸರಿಯಲ್ಲ. ಜನಾಂಗದಲ್ಲಿಯೇ ಇರುವ ಅನುಕೂಲಸ್ಥರು ಮುಂದೆ ಬಂದು ಬಡಜನರಿಗೆ ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಸಹಾಯ ಮಾಡಬೇಕಾಗಿದೆ ಎಂದರು.

ಸಮಾಜದ ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತಿರುವ ವಿದ್ಯಾರ್ಥಿನಿಲಯದ ಕಾರ್ಯವನ್ನು ಅವರು ಶ್ಲಾಘಿಸಿದರು.

ಪ್ರಾಥಮಿಕ ಶಿಕ್ಷಣ ಇಲಾಖೆ ನಿರ್ದೇಶಕ ಗುರುಮೂರ್ತಿ ಮಾತನಾಡಿದರು. ಹಳೇ ವಿದ್ಯಾರ್ಥಿಗಳ ಸಂಘದ ಅಧ್ಯಕ್ಷ ಆರ್.ಕೃಷ್ಣಪ್ಪ ಅಧ್ಯಕ್ಷತೆ ವಹಿಸಿದ್ದರು.

ಸಂಘದ ಉಪಾಧ್ಯಕ್ಷ ಇ.ವಿ.ಸತ್ಯನಾರಾಯಣ ಸ್ವಾಗತಿಸಿದರು. ಸಮಾಜದ ಗಣ್ಯರಾದ ಎಚ್.ಆಂಜನಪ್ಪ, ಎಸ್.ಎಂ.ರಾಮಹನುಮಯ್ಯ, ಎ.ಆರ್.ರಾಮಯ್ಯ ಮುಂತಾದವರು ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ವಿದ್ಯಾರ್ಥಿಗಳಾದ ವೈ.ಅಭಿಷೇಕ್, ಎಸ್.ಮೇಘನಾ, ಆರ್.ಪವಿತ್ರಾ, ಎನ್.ಮಮತಾ ಲಕ್ಷ್ಮಿ ಕೆ. ಪುನೀತ್ ಪ್ರಕಾಶ್, ಪಿ.ಪಿ. ಸುನೀತಾ ಅವರಿಗೆ ಚಿನ್ನದ ಪದಕ ಹಾಗೂ ಇತರ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಶಿಷ್ಯವೇತನ ನೀಡಲಾಯಿತು.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ನಿವೃತ್ತ ಪ್ರಾಂಶುಪಾಲ ಪ್ರೊ.ಜಿ.ವಿ.ದಾಸೇಗೌಡ, ಕರ್ನಾಟಕ ಮಾಧ್ಯಮ ಅಕಾಡೆಮಿ ಪ್ರಶಸ್ತಿ ಪಡೆದ 'ಪ್ರಜಾವಾಣಿ' ಹಿರಿಯ ವರದಿಗಾರ್ತಿ ಸುಚೇತನಾ ನಾಯ್ಕ ಹಾಗೂ ಅತ್ಯುತ್ತಮ ವಿನ್ಯಾಸಕ್ಕೆ ರಾಷ್ಟ್ರೀಯ ಪ್ರಶಸ್ತಿ ಪಡೆದ ಎಸ್.ರಾಜೇಶ್ ಅವರನ್ನು ಸನ್ಮಾನಿಸಲಾಯಿತು.

ಜಂಟಿ ಕಾರ್ಯದರ್ಶಿ ಎಚ್.ಭದ್ರಪ್ಪ ವಂದನೆ ಸಲ್ಲಿಸಿದರು.

# ಶಾಲಾ, ಕಾಲೇಜುಗಳಲ್ಲಿ ಖಾದಿ!

'ಬೆಂಗಳೂರು ಎಜುಕೇಷನ್ ಸೊಸೈಟಿ' ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು ತಮ್ಮ ಶಾಲಾ, ಕಾಲೇಜುಗಳ ವಿದ್ಯಾರ್ಥಿಗಳಿಗೆ ಖಾದಿ ಉಡುಪನ್ನು ಸಮವಸ್ತ್ರವಾಗಿ ಮಾಡುವ ಮೂಲಕ ಖಾದಿಗೆ ಹೊಸ ಚೈತನ್ಯ ನೀಡಿವೆ.

'ಖಾದಿಯ ಒಂದು ಯುಗ ಮುಗಿದಿದೆ. ಸ್ವಾತಂತ್ರ್ಯ ಚಳವಳಿ ಸಂದರ್ಭದಲ್ಲಿ ಗಾಂಧೀಜಿ ಗ್ರಾಮೀಣ ಜನರಿಗೆ ಸ್ಥಳೀಯವಾಗಿ ಉದ್ಯೋಗ ನೀಡಲು, ಸ್ವದೇಶಿ ಉತ್ಪನ್ನಗಳ ಬಗ್ಗೆ ಜನರ ಗಮನ ಸೆಳೆಯಲು ಖಾದಿಯನ್ನು ಬಳಸಿಕೊಂಡಿದ್ದರು. ಗ್ರಾಮೀಣ ಬಡಜನರ ಆರ್ಥಿಕ ವಿಕಾಸಕ್ಕೆ ಖಾದಿಯ ಕೊಡುಗೆ ಅಪಾರ.

ಗಾಂಧೀಜಿಯವರಿಗೂ ಖಾದಿಗೂ ಅವಿನಾಭಾವ ಸಂಬಂಧ. ಖಾದಿ ಸರಳ, ಪರಿಶುಭ್ರತೆ, ದೇಶ ಭಕ್ತಿ ಮತ್ತು ಪರಿಶ್ರಮದ ಸಂಕೇತ. ಖಾದಿ ರಾಜಕಾರಣಿಗಳ ಉಡುಪು ಎನ್ನುವಂತಾದ ನಂತರ ತನ್ನ ಖದರ್ ಕಳೆದುಕೊಂಡಿತು. ಈಗ ಖಾದಿ ಎಂದರೆ ಅನೇಕರಿಗೆ ಅಲರ್ಜಿ. ಆಧುನಿಕತೆಯ ಬೆನ್ನು ಹತ್ತಿದವರು ಖಾದಿಯತ್ತ ತಿರುಗಿಯೂ ನೋಡುವುದಿಲ್ಲ.

ಇಂತಹ ಸಂದರ್ಭದಲ್ಲಿ 'ಬೆಂಗಳೂರು ಎಜುಕೇಷನ್ ಸೊಸೈಟಿ' ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು ತಮ್ಮ ಶಾಲಾ, ಕಾಲೇಜುಗಳ ವಿದ್ಯಾರ್ಥಿಗಳಿಗೆ ಖಾದಿ ಉಡುಪನ್ನು ಸಮವಸ್ತ್ರವಾಗಿ ಮಾಡುವ ಮೂಲಕ ಖಾದಿಗೆ ಹೊಸ ಚೈತನ್ಯ ನೀಡಿವೆ.

ಬಡವರು ಮತ್ತು ಕೆಳ ಮಧ್ಯಮ ವರ್ಗದವರೂ ಈಗ ಜೀನ್ಸ್, ಮತ್ತಿತರ ಆಧುನಿಕ ವಸ್ತ್ರಗಳತ್ತ ಆಕರ್ಷಿತರಾಗುತ್ತಿದ್ದಾರೆ. ಕಾಲ ಬದಲಾದಂತೆ ಖಾದಿಗೆ ಕಾಯಕಲ್ಪ ನೀಡುವ ಪ್ರಯತ್ನವೂ ನಡೆಯುತ್ತಲೇ ಇದೆ. ಆಧುನಿಕತೆಯನ್ನು ಇಷ್ಟಪಡುವ ಹಾಗೂ ಫ್ಯಾಷನ್ ಪ್ರಿಯರಿಗಾಗಿ ಖಾದಿ ಬದಲಾಗುತ್ತಿದೆ. ಈ ಕಾಲದ ಯುವಜನರಿಗೂ ಇಷ್ಟವಾಗುವ ಖಾದಿ ಬಟ್ಟೆ ಹಾಗೂ ಸಿದ್ಧ ಉಡುಪುಗಳು ಈಗ ಮಾರುಕಟ್ಟೆಯಲ್ಲಿ ಲಭ್ಯ. ಸಂಗೀತ, ಸಾಹಿತ್ಯದ ಕಾರ್ಯಕ್ರಮಗಳಲ್ಲಿ ಖಾದಿ ಉಡುಪು ತೊಟ್ಟವರು ಈಗ ಎಲ್ಲರ ಗಮನ ಸೆಳೆಯುತ್ತಿದ್ದಾರೆ.





ಬೆಂಗಳೂರಿನ ವಿಧಾಯಕ ಕಾರ್ಯಕರ್ತ ಹೊ. ಶ್ರೀನಿವಾಸಯ್ಯ ಅವರ ನೇತೃತ್ವದ 'ಬೆಂಗಳೂರು ಎಜುಕೇಷನ್ ಸೊಸೈಟಿ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ವಿದ್ಯಾರ್ಥಿಗಳು ಖಾದಿ ಉಡುಪು ಧರಿಸುವ ದೀಕ್ಷೆ ತೊಟ್ಟಿದ್ದಾರೆ. ಒಂದನೇ ತರಗತಿಯ ಪುಟ್ಟ ಮಕ್ಕಳಿಂದ ಕಾನೂನು ಪದವಿ ವಿದ್ಯಾರ್ಥಿಗಳವರೆಗೂ ಇಲ್ಲಿ ಖಾದಿ ಸಮವಸ್ತ್ರ. ವಿದ್ಯಾರ್ಥಿಗಳು ಮಾತ್ರವಲ್ಲದೆ ಶಿಕ್ಷಕರು, ಉಪನ್ಯಾಸಕರು ಹಾಗೂ ಇತರ ಸಿಬ್ಬಂದಿ ಖಾದಿ ತೊಡುತ್ತಾರೆ. ಇಡೀ ಕ್ಯಾಂಪಸ್ ಈಗ ಖಾದಿಮಯವಾಗಿದೆ. ಸಂಸ್ಥೆಯ ಗೌರವ ಕಾರ್ಯದರ್ಶಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಈ ಬದಲಾವಣೆ ಹಿಂದಿನ ರೂವಾರಿ. ಅವರಿಗೆ ಕರ್ನಾಟಕ ಕಾನೂನು ವಿಶ್ವವಿದ್ಯಾಲಯದ ಕುಲಪತಿ ಡಾ.ಜೆ.ಎಸ್.ಪಾಟೀಲ ಮಾರ್ಗದರ್ಶಕರು.

ಬೆಂಗಳೂರು ಎಜುಕೇಷನ್ ಸೊಸೈಟಿಯ ಶಾಲೆಯ ನಾನೂರು ಮಕ್ಕಳು ಈಗ ಖಾದಿ ಸಮವಸ್ತ್ರ ಧರಿಸಿ ಶಾಲೆಗೆ ಬರುತ್ತಾರೆ. ಶಾಲೆಯ ಮಕ್ಕಳಿಗೆ ಹೊ. ಶ್ರೀನಿವಾಸಯ್ಯ ಅವರು ವಾರಕ್ಕೊಮ್ಮೆ ಖಾದಿ ಮಹತ್ವ ಮತ್ತು ಗಾಂಧೀಜಿ ಅವರ ಬದುಕಿನ ಬಗ್ಗೆ ಉಪನ್ಯಾಸ ನೀಡುತ್ತಾರೆ. ಶಾಲೆಯ ಮಕ್ಕಳ ಸಮವಸ್ತ್ರಕ್ಕೆ ಬೇಕಾದ ಖಾದಿ ಬಟ್ಟೆಯನ್ನು ಪೂರೈಸುತ್ತಿರುವುದು ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಯುಕ್ತ ಸಂಘ.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಒಂದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಖಾದಿ ಸಮವಸ್ತ್ರವನ್ನು ವಾರಕ್ಕೆರಡು ಬಾರಿ ತೊಡುತ್ತಾರೆ. ಒಂದನೇ ತರಗತಿಯಿಂದ 5ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಬಿಳಿ ಶರ್ಟ್ ಹಾಗೂ ಚಡ್ಡಿ. ವಿದ್ಯಾರ್ಥಿನಿಯರಿಗೆ ಶರ್ಟ್ ಹಾಗೂ ಸ್ಕರ್ಟ್ ಸಮವಸ್ತ್ರವಾಗಿದೆ. ಪ್ರೌಢಶಾಲೆ ವಿದ್ಯಾರ್ಥಿಗಳಿಗೆ ಖಾದಿ ಶರ್ಟ್ ಹಾಗೂ ಪ್ಯಾಂಟ್, ವಿದ್ಯಾರ್ಥಿನಿಯರಿಗೆ ಚೂಡಿದಾರ್ ಸಮವಸ್ತ್ರ. ಸಂಸ್ಥೆಯ ಕಾನೂನು ಕಾಲೇಜು ವಿದ್ಯಾರ್ಥಿಗಳೂ ಖಾದಿ ತೊಡುತ್ತಿದ್ದಾರೆ.

ಬಿಳಿ ಖಾದಿ ತೊಡುವುದು ನಿಯಮ ಪಾಲನೆಗಾಗಿ ಅಲ್ಲ. ಅದು ಗೌರವದ ಸಂಕೇತ. ಖಾದಿ ತೊಡುವುದು ಅತ್ಯಂತ ಹಿತವಾದ ಅನುಭವ. ಖಾದಿಗೂ ದೇಶದ ಸ್ವಾತಂತ್ರ್ಯ ಚಳವಳಿಗೂ ಇರುವ ಸಂಬಂಧವನ್ನು ನೆನಪು ಮಾಡಿಕೊಂಡರೆ ಖಾದಿ ತೊಡುವುದಕ್ಕೆ ಹೆಮ್ಮೆ ಅನ್ನಿಸುತ್ತದೆ ಎಂದು ವಿದ್ಯಾರ್ಥಿಗಳು ಹೇಳುತ್ತಾರೆ.

ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗೆ ಸ್ವತಃ ಶಿಕ್ಷಣ ಸಂಸ್ಥೆಯೇ ಉಚಿತವಾಗಿ ಖಾದಿ ಸಮವಸ್ತ್ರ ವಿತರಿಸುತ್ತಿದೆ. ಇದರಿಂದ ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಘಕ್ಕೆ ಮತ್ತು ಖಾದಿಯನ್ನೇ ಅವಲಂಬಿಸಿರುವ ಹಲವಾರು ಶ್ರಮಜೀವಿಗಳಿಗೆ ಅನುಕೂಲವಾಗಿದೆ ಎನ್ನುತ್ತಾರೆ ಸಂಘದ ಕಾರ್ಯದರ್ಶಿ ಎಸ್.ವಿ. ಸೋಮನಹಟ್ಟಿ.

ಕಾನೂನು ವಿಶ್ವವಿದ್ಯಾಲಯದ ಕುಲಪತಿ ಎಸ್.ಎ. ಪಾಟೀಲರ ಸೂಚನೆ ಮೇರೆಗೆ ಮಂಡ್ಯ, ಚಿಕ್ಕಮಗಳೂರು, ಬೆಂಗಳೂರಿನ ಕೆಎಲ್ಇ ಸೊಸೈಟಿಯ ಕಾನೂನು ಕಾಲೇಜುಗಳು ಖಾದಿಯನ್ನು ಸಮವಸ್ತ್ರವನ್ನಾಗಿ ಅಳವಡಿಸಿಕೊಳ್ಳುವ ಉತ್ಸಾಹ ತೋರಿವೆ. ಈ ಬೆಳವಣಿಗೆ ಖಾದಿ ಶೈಕ್ಷಣಿಕ ವಲಯದಲ್ಲಿ ಹೊಸ ಸಂಚಲನ ಸೃಷ್ಟಿಸಿದೆ.

■ ಇ.ಎಸ್. ಸುಧೀಂದ್ರ ಪ್ರಸಾದ್

ಕನ್ನಡಪ್ರಭ, ಭಾನುವಾರ, 23 ಜನವರಿ 2011

## ಸುದ್ದಿ ಸಂಕ್ಷೇಪ



ಶೇಷಾದ್ರಿಪುರ ಕಾಲೇಜು ಏರ್ಪಡಿಸಿದ್ದ ಕಾಲೇಜಿನ ಪರಿಸರ ಸಂಘ ಕ್ಷಿತಿಯ ಉದ್ಘಾಟನೆಗೆ ಆಗಮಿಸಿದ್ದ ಡಾ. ನಂದಿನಿ ಎನ್. ಅವರನ್ನು ಶೇಷಾದ್ರಿಪುರ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಅಭಿನಂದಿಸಿದರು. ಪ್ರೊ।ಜಯಶ್ರೀ ಸಿಂಗ್ ಇದ್ದರು.

ನಾವು ಕನ್ನಡಿಗರು

ಸೋಮವಾರ 17-1-2011

# ರೆಡ್‌ಕ್ರಾಸ್ ಪ್ರಧಾನ ಕಾರ್ಯದರ್ಶಿಗೆ ಗೌರವಾರ್ಪಣೆ



ಶೇಷಾದ್ರಿಪುರ ಕಾಲೇಜು ಯೂತ್ ರೆಡ್ ಕ್ರಾಸ್ ಸಹಯೋಗದೊಂದಿಗೆ ಏರ್ಪಡಿಸಿದ್ದ ರಾಷ್ಟ್ರೀಯ ಸ್ವಯಂ ಸೇವಕರ ವರ್ಷಾಚರಣೆಯ ಸಮಯದಲ್ಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ಎಸ್.ಪಿ. ಅಗರ್‌ವಾಲ್ ಅವರನ್ನು ಡಾ. ವೂಡೇ ಪಿ.ಕೃಷ್ಣ ಸನ್ಮಾನಿಸಿದರು.

ಈ ಸಂಜೆ

ಭಾನುವಾರ
16 ಜನವರಿ 2011

# ವಿವೇಕಾನಂದ ವಿಶ್ವಕ್ಕೆ ಆದರ್ಶನೀಯ



ಬೆಂಗಳೂರು, ಜ.16- ಸನಾತನ ಹಿಂದೂಧರ್ಮದ ಧ್ಯೇಯಗಳನ್ನು ಜಗತ್ತಿಗೆ ಪಸರಿಸಿದವರು ಸ್ವಾಮಿ ವಿವೇಕಾನಂದರು ಎಂದು ಸಂಸ್ಕೃತಿ ಚಿಂತಕ, ಖ್ಯಾತ ಕೈಗಾರಿಕೋದ್ಯಮಿ ಬಿ.ಎಸ್. ದಿವಾಕರ್ ತಿಳಿಸಿದರು.

ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಿದ್ದ ಸ್ವಾಮಿ ವಿವೇಕಾನಂದರ ಜಯಂತೋತ್ಸವನ್ನು ಉದ್ಘಾಟಿಸಿ ಮಾತನಾಡಿದರು.

ಈ ದೇಶದ ಪ್ರಗತಿಯೇ ನನ್ನ ಧ್ಯೇಯ ಗುರಿ, ಗುಲಾಮಗಿರಿಯಲ್ಲಿರುವ ಭಾರತವನ್ನು ಆತ್ಮಗೌರವದಿಂದ ಮುನ್ನಡೆಯುವಂತೆ ಭಾರತೀಯರನ್ನು ಎಚ್ಚರಿಸಿ ಜಾಗ್ರತಗೊಳಿಸುವುದು ನನ್ನ ಪರಮ ಗುರಿ ಎಂದು ಹೇಳಿದರು ಸ್ವಾಮಿ ವಿವೇಕಾನಂದರು ಎಂದು ವಿವರಿಸಿದರು.

ಸಾಹಿತ್ಯ, ಸಂಗೀತ, ತರ್ಕಶಾಸ್ತ್ರ ಭಾರತೀಯ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಎತ್ತಿ ಹಿಡಿದ ಕೀರ್ತಿ, ಜಗತ್ತು ಇಂದು ಭಾರತವನ್ನು ಗುರುತಿಸುತ್ತಿರುವುದು. ಆದರ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹಾಗೂ ಸಂಸ್ಕೃತಿಯ ಚಿಂತನೆ, ತತ್ವ ಆದರ್ಶಗಳನ್ನು ನೀಡಿದ ಸ್ವಾಮಿ ವಿವೇಕಾನಂದರಿಂದಲೇ ಎಂದು ನುಡಿದರು.

ವಿವೇಕಾನಂದರನ್ನು ಅರ್ಥೈಸಬೇಕಾದರೆ ಮಹಾಕವಿ ಕುವೆಂಪುರವರನ್ನು ಓದಬೇಕು ಎಂದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಪ್ರೊ. ಎಂ. ಆರ್. ಶ್ರೀನಿವಾಸ್, ತಂದೆ, ತಾಯಿ, ಗುರುಗಳ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದೇ ಸ್ವಾಮಿ ವಿವೇಕಾನಂದರ ಆದರ್ಶಗಳನ್ನು ಅಳವಡಿಸಿಕೊಂಡಂತೆ.

ಧ್ಯಾನ, ತಪಸ್ಸು, ಜಪ, ಮನನ ಹಾಗೂ ಸತತ ಪರಿಶ್ರಮ ಹಾಗೂ ಪ್ರಾಮಾಣಿಕತೆ ಇದ್ದರೆ ವಿದ್ಯಾರ್ಥಿಗಳು ಜೀವನದಲ್ಲಿ ಏನನ್ನಾದರೂ ಸಾಧಿಸಬಹುದೆಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ, ಶಿಕ್ಷಣ ತಜ್ಞರೂ ಆದ ಡಾ. ವೂಡೆ ಪಿ. ಕೃಷ್ಣ, ಶಿಕ್ಷಣ ದತ್ತಿಯ ಧರ್ಮದರ್ಶಿಗಳಾದ ವೀರಭದ್ರಯ್ಯ, ಕೃಷ್ಣಸ್ವಾಮಿ, ಉಪನ್ಯಾಸಕರಾದ ಬಿ.ಎಸ್. ಅಶೋಕ್‌ಕುಮಾರ್, ಎಸ್. ರಾಮಲಿಂಗೇಶ್ವರ್, ಎಸ್. ಆರ್. ವೆಂಕಟೇಶ್ ಇದ್ದರು.

ಕನ್ನಡಪ್ರಭ, ಬೆಂಗಳೂರು

ಶುಕ್ರವಾರ, 14 ಜನವರಿ 2011

## ಸನ್ಮಾನ...

ಶೇಷಾದ್ರಿಪುರ ಪದವಿ ಪೂರ್ವ ಕಾಲೇಜಿನಲ್ಲಿ ಏರ್ಪಡಿಸಿದ್ದ ಸ್ವಾಮಿ ವಿವೇಕಾನಂದರ ಜಯಂತಿಯಲ್ಲಿ ಕೈಗಾರಿಕೋದ್ಯಮಿ ಬಿ.ಎಸ್. ದಿವಾಕರ್ ಅವರನ್ನು ಶಿಕ್ಷಣ ತಜ್ಞ ಡಾ. ವೂಡೇ ಪಿ.ಕೃಷ್ಣ ಸನ್ಮಾನಿಸಿದರು. ಶ್ರೀನಿವಾಸ್, ವೀರಭದ್ರಯ್ಯ ಭಾಗವಹಿಸಿದ್ದರು.



ಉದಯವಾಣಿ
ಬುಧವಾರ | ಜನವರಿ | 26 | 2011

**ಶೇಷಾದ್ರಿಪುರಂ ಸಂಯುಕ್ತ ಪದವಿಪೂರ್ವ ಕಾಲೇಜು:** ಮುಖ್ಯ ಕ್ಯಾಂಪಸ್. ಧ್ವಜಾರೋಹಣ. ಮುಖ್ಯ ಅತಿಥಿ: ಪ್ರೊ. ಆರ್.ಎಂ. ವಾಸಗಂ. ಅಧ್ಯಕ್ಷತೆ: ಎನ್. ಆರ್. ಪಂಡಿತಾರಾಧ್ಯ, ಮುಖ್ಯ ಅತಿಥಿ: ಡಾ. ವೂಡೇ ಪಿ. ಕೃಷ್ಣ. ಬೆಳಗ್ಗೆ 7.30.

ಸಂಜೆವಾಣಿ ಗುರುವಾರ 13 ಜನವರಿ 2011



ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನವರು ಏರ್ಪಡಿಸಿದ್ದ ಸ್ವಾಮಿ ವಿವೇಕಾನಂದ ಜಯಂತ್ಯೋತ್ಸವದಲ್ಲಿ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣರವರು ದೀಪ ಬೆಳಗಿದರು. ಕೃಷ್ಣಸ್ವಾಮಿ, ಬಿ.ಎಸ್. ದಿವಾಕರ್, ಎಂ.ಆರ್. ಶ್ರೀನಿವಾಸ್ ಚಿತ್ರದಲ್ಲಿದ್ದಾರೆ.

ಕನ್ನಡಪ್ರಭ, ಗುರುವಾರ, 13 ಜನವರಿ 2011




## ಸನ್ಮಾನ...

ಶೇಷಾದ್ರಿಪುರ ಕಾಲೇಜು ಯೂತ್ ರೆಡ್‌ಕ್ರಾಸ್ ಸಹಯೋಗದೊಂದಿಗೆ ಏರ್ಪಡಿಸಿದ್ದ ರಾಷ್ಟ್ರೀಯ ಸ್ವಯಂ ಸೇವಕರ ವಾರ್ಷಿಕಾಚರಣೆಯ ಸಮಯದಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ಎಸ್.ಪಿ.ಅಗರ್‌ವಾಲ್ ಅವರನ್ನು ಡಾ.ವೂಡೇ ಪಿ.ಕೃಷ್ಣ ಹಾಗೂ ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಸನ್ಮಾನಿಸಿದರು.

ಈ ಸಂಜೆ ಮಂಗಳವಾರ, 11 ಜನವರಿ 2011



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವವನ್ನು ಕನ್ನಡ ಸಾಹಿತ್ಯ ಪರಿಷತ್ ಪ್ರಧಾನ ಕಾರ್ಯದರ್ಶಿ ಮುಕುಂದ್ ರಾಜ್ ಉದ್ಘಾಟಿಸಿದರು. ದತ್ತಿ ಅಧ್ಯಕ್ಷ ಪಂಡಿತಾರಾಧ್ಯ, ಡಾ.ವೂಡೆ ಪಿ.ಕೃಷ್ಣ ಸರೋಜಾ ನಂಜಪ್ಪ, ಪ್ರಾಂಶುಪಾಲರಾದ ಮಹಾಲಕ್ಷ್ಮೀ, ಎಸ್.ವೀರಭದ್ರಯ್ಯ, ಭೈರೇಗೌಡ ಮತ್ತಿತರರಿದ್ದರು.




ಮಂಗಳವಾರ 11 ಜನವರಿ 2011

# ವಿವೇಕಾನಂದ ಜಯಂತಿ ಯುವ ದಿನಾಚರಣೆ

ಬೆಂಗಳೂರು, ಜ. ೧೧- ನಗರದ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ನಾಳೆ ಬೆಳಿಗ್ಗೆ 9.30ಕ್ಕೆ ಕಾಲೇಜು ಸಭಾಂಗಣದಲ್ಲಿ 2011ರ ಸ್ವಾಮಿ ವಿವೇಕಾನಂದ ಜಯಂತ್ಯೋತ್ಸವ ಹಾಗೂ ರಾಷ್ಟ್ರೀಯ ಯುವ ದಿನಾಚರಣೆ ಸಮಾರೋಪ ಸಮಾರಂಭ ಮತ್ತು ಬಹುಮಾನ ವಿತರಣಾ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

ಖ್ಯಾತ ಕೈಗಾರಿಕೋದ್ಯಮಿ ಹಾಗೂ ಸಂಸ್ಕೃತಿ ಚಿಂತಕ ಬಿ.ಎಸ್. ದಿವಾಕರ್ ಕಾರ್ಯಕ್ರಮ ಉದ್ಘಾಟಿಸುವರು. ಪ್ರಾಂಶುಪಾಲರಾದ ಪ್ರೊ. ಎಂ.ಆರ್. ಶ್ರೀನಿವಾಸ್ ಅಧ್ಯಕ್ಷತೆ ವಹಿಸಲಿದ್ದಾರೆ. ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿಗಳಾದ ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿರುವರು.

ಪ್ರಜಾವಾಣಿ
ಭಾನುವಾರ 9ನೇ ಜನವರಿ 2011

## ವಾರ್ಷಿಕೋತ್ಸವ

ಬೆಂಗಳೂರಿನ ಶೇಷಾದ್ರಿಪುರ ಸಂಜೆ ಪಿ.ಯು. ಕಾಲೇಜಿನ ವಾರ್ಷಿಕೋತ್ಸವವನ್ನು ಸಾಹಿತಿ ಎಲ್.ಎನ್.ಮುಕುಂದರಾಜ್ ಉದ್ಘಾಟಿಸಿದರು. ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಪ್ರಾಂಶುಪಾಲರಾದ ಆರ್.ಮಹಾಲಕ್ಷ್ಮಿ, ಎಸ್.ವೀರಭದ್ರಯ್ಯ, ಭೈರೇಗೌಡ ಚಿತ್ರದಲ್ಲಿದ್ದಾರೆ.



ಪ್ರಜಾವಾಣಿ

ಮಂಗಳವಾರ 4ನೇ ಜನವರಿ 2011

# ದುರ್ಬಲಗೊಳ್ಳುತ್ತಿರುವ ಮೌಲ್ಯ: ವಿಷಾದ

ಪ್ರಜಾವಾಣಿ ವಾರ್ತೆ

ತುರುವೇಕೆರೆ: ಜ್ಞಾನಾರ್ಜನೆ ಮತ್ತು ಸಮಾಜದ ಕೊಂಕನ್ನು ತಿದ್ದಲು ಉಪನಿಷತ್‌ಗಳು ಆಕರ ಗ್ರಂಥಗಳಾಗಿದ್ದವು. ಬದಲಾದ ಕಾಲ ಹಾಗೂ ಮೌಲ್ಯಗಳಿಗೆ ತಕ್ಕ ಹಾಗೆ ಮನಪರಿವರ್ತನೆ ಮಾಡುವಂತಹ ಕಾಣ್ಕೆಗಳು ಹಾಗೂ ಮೌಲಿಕ ಗ್ರಂಥಗಳು ದುರ್ಲಭವಾಗುತ್ತಿವೆ ಎಂದು ಸಾಹಿತಿ ದೇ.ಜವರೇಗೌಡ ವಿಷಾದಿಸಿದರು.

ಇಲ್ಲಿಗೆ ಸಮೀಪದ ಮಾದಿಹಳ್ಳಿ ಬದರಿಕಾಶ್ರಮದಲ್ಲಿ ಭಾನುವಾರ ನಡೆದ ಶಾರದಾದೇವಿ ಜಯಂತ್ಯುತ್ಸವ ಉದ್ಘಾಟಿಸಿ ಮಾತನಾಡಿದ ಅವರು, ಶಾರದಾದೇವಿ ಜಾಗೃತಿ ಮತ್ತು ಸ್ತ್ರೀ ಶಕ್ತಿ ಸಂಚಯನದ ಪ್ರತೀಕವಾಗಿದ್ದಾರೆ ಎಂದರು.



ತುರುವೇಕೆರೆ ಸಮೀಪ ಮಾದಿಹಳ್ಳಿ ಬದರಿಕಾಶ್ರಮದಲ್ಲಿ ಭಾನುವಾರ ನಡೆದ ಶಾರದಾದೇವಿ ಜಯಂತ್ಯುತ್ಸವವನ್ನು ನಾಡೋಜ ದೇ.ಜವರೇಗೌಡ ಉದ್ಘಾಟಿಸಿದರು. ಸ್ವಾಮಿ ಓಂಕಾರಾನಂದ ಮಹಾರಾಜ್, ಸ್ವಾಮಿ ಮಹೇಶಾತ್ಮಾನಂದ ಮಹಾರಾಜ್, ಡಾ.ವುಡೇ.ಪಿ.ಕೃಷ್ಣ, ವಿಜಯನಗರ ಶಾಸಕ ಎಂ.ಕೃಷ್ಣಪ್ಪ, ಕೆ.ಬಿ.ಬೆಟ್ಟೇಗೌಡ, ಪ್ರೊ.ಶ್ರೀನಿವಾಸ್, ಕೈಗಾರಿಕೋದ್ಯಮಿ ಲಕ್ಷ್ಮಿನಾರಾಯಣ್ ಚಿತ್ರದಲ್ಲಿದ್ದಾರೆ.

ಸ್ವಾಮಿ ಓಂಕಾರಾನಂದ ಮಹಾರಾಜ್, ಸ್ವಾಮಿ ಮಹೇಶಾತ್ಮಾನಂದ ಮಹಾರಾಜ್ ಆಶೀರ್ವಚನ ನೀಡಿದರು. ಡಾ.ವುಡೇ.ಪಿ.ಕೃಷ್ಣ, ವಿಜಯನಗರ ಶಾಸಕ ಎಂ.ಕೃಷ್ಣಪ್ಪ ಮಾತನಾಡಿದರು. ಕೆ.ಬಿ.ಬೆಟ್ಟೇಗೌಡ, ಪ್ರೊ.ಶ್ರೀನಿವಾಸ್, ಕೈಗಾರಿಕೋದ್ಯಮಿ ಲಕ್ಷ್ಮಿನಾರಾಯಣ್ ಇತರರು ಇದ್ದರು. ಪ್ರೊ.ಜಿ.ಬಿ.ಶಿವರಾಜ್ ಸ್ವಾಗತಿಸಿದರು. ಅಶೋಕ್ ಕುಮಾರ್ ನಿರೂಪಿಸಿದರು.